


ಸ್ಕೌಟ್ ಶತಮಾನೋತ್ಸವ - 2007

ಕರ್ನಾಟಕ

# ಸ್ಕೌಟ್ ಮತ್ತು ಗೈಡ್ಸ್ ವಾರ್ತಾ ಪತ್ರಿಕೆ

# Karnataka Scout & Guide

News Magazine






VOL. - 7 OCTOBER 2007 NO. - 9







Sri N.K. Nanda, General Manager, Donimalai Iron Ore Mine, National Mineral Development Corportion Ltd, Inaugurated the 31st State Level Cubs & Bulbuls Utsav held from 14 - 17 October 2007 at Donimalai on 14 October 2007. He released ' CHIGURU CHETANA' - Souvenir on this occasion. Sri Kodajji B. Shanmukhappa, State Chief Commissioner, Sri T. Ramakrishna, Additional General Manager, Donimalai Iron Ore Mine, NMDC. Sri R. Venkanna, Dist Chief Commissioner, Dr. Tekur Ramanath, & Smt. Shantha Lakshmi Jayaram, District Commissioners, Bellary are also seen.



Sri K. S. L. Swamy, Hon'ble M.L.C, Sandur, presenting the Certificates to a Cub & Bulbul on 17th October 2007 at the 31st State Level Cubs & Bulbuls Utsav held at Donimalai, Bellary District.



Sri H.T. Sangliana, Hon'ble Member of Parliament, Bangalore North was Felicitated by Sri T.S. Lucas, Asst. State Commissioner (Scouts), on 2nd October 2007 at Bangalore. Prof. M.Suryanarayanappa, Asst. State Commissioner(Scouts) & Smt Geetha Nataraj, Joint State Secretary(Guides) are also seen.

# Activities held at the 31st State Level Cubs & Bulbuls Utsav, from14 - 17 October 2007 at Donimalai Township, NMDC



Sri S.K. Varma, Additional General Manager, Donimalai Iron Ore Mine, National Mineral Development Corportion Ltd, Inaugurated the Mini Olympic Games on 15th October 2007.



Smt. Sagarika, W/o. Sri N.K. Nanda, Genera Manager, Donimalai Iron Ore Mine, Inaugurate the Folk Dance Programmes on15th October 2007 Sri S.C. Bose, Additional General Manage Donimalai Iron Ore Mine is also seen



A view of the Utsav Arena. The National Flag, The SCOUTS & GUIDES Flag & The Utsav Flag are Flying High.



A View of the Cubs ,& A Cub presenting his impression of the Utsav



A View of the Bulbuls ,& A Bulbu presenting her impression of the Utsav



Cubs participating in the Make Things Activities at the Utsav.



Bulbuls participating in the Make Things Activities at the Utsav.




Vol - 7 October - 2007 No. 9

ಕರ್ನಾಟಕದ ಸಮಸ್ತರಿಗೆ ಹಾಗೂ ಸ್ಕೌಟ್-ಗೈಡ್‌ನ ಎಲ್ಲ ಕಾರ್ಯಕರ್ತರಿಗೆ 51ನೇ ರಾಜ್ಯೋತ್ಸವ ಹಾಗೂ ದೀಪಾವಳಿ ಹಬ್ಬದ ಹಾರ್ದಿಕ ಶುಭಾಶಯಗಳು



## ಪರಿವಿಡಿ

1. ರಾಜ್ಯ ಮುಖ್ಯ ಆಯುಕ್ತರ ನುಡಿ 4
2. ಅಭಿನಂದನೆಗಳು 6
3. *31th State Level Cubs & Bulbuls Utsav held at Donimalai, Bellary District from 14th to 17th October 2007* 7
4. 89ನೇ ರಾಜ್ಯ ಪರಿಷತ್ ಸಭೆ 9
5. 31ನೇ ರಾಜ್ಯ ಮಟ್ಟದ ಕಬ್ ಮತ್ತು ಬುಲ್‌ಬುಲ್ ಉತ್ಸವ 11
6. ವಚನ ಮೌಲ್ಯ 15
7. ಜಿಲ್ಲಾ ವಾರ್ತೆ 17

# ರಾಜ್ಯ ಮುಖ್ಯ ಆಯುಕ್ತರ ನುಡಿ..............................................

## ಕರ್ನಾಟಕದ ಸಮಸ್ತರಿಗೆ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಎಲ್ಲರಿಗೂ ರಾಜ್ಯೋತ್ಸವ ಹಾಗೂ ದೀಪಾವಳಿ ಹಬ್ಬದ ಹಾರ್ದಿಕ ಶುಭಾಷಯಗಳು

*ಮಾನ್ಯರೆ,*

ದಿನಾಂಕ 14 ರಿಂದ 17 ಅಕ್ಟೋಬರ್ ವರೆವಿಗೆ ಬಳ್ಳಾರಿ ಜಿಲ್ಲೆ ದೋಣಿಮಲೈ ಎನ್.ಎಂ.ಡಿ.ಸಿ ಟೌನ್‌ಷಿಪ್‌ನಲ್ಲಿ ಜರುಗಿದ 31ನೇ ರಾಜ್ಯ ಮಟ್ಟದ ಕಬ್, ಬುಲ್‌ಬುಲ್ ಉತ್ಸವ ಅತ್ಯಂತ ಸಂಭ್ರಮ ಸಡಗರ ಹಾಗೂ ಉತ್ಸಾಹದಿಂದ ಕೂಡಿತ್ತು. ರಾಜ್ಯದ ಹಲವಾರು ಜಿಲ್ಲೆಗಳಿಂದ ಅತ್ಯುತ್ಸಾಹದಿಂದ ಭಾಗವಹಿಸಿದ ಪುಟಾಣಿ ಹಕ್ಕಿಗಳು, ಮರಿಗಳು, ನಾಲ್ಕು ದಿನಗಳ ಉತ್ಸವದಲ್ಲಿ ಹಮ್ಮಿಕೊಂಡಿದ್ದ ಸಾಹಸ ಚಟುವಟಿಕೆಗಳು, ಮಿನಿ ಒಲೆಂಪಿಕ್ಸ್, ಶಿಬಿರಾಗ್ನಿಗಳು, ಆಶು ಭಾಷಣ ಸ್ಪರ್ಧೆಯಲ್ಲಿ ಭಾಗವಹಿಸಿ, ತಮ್ಮ ಸುಪ್ತ ಪ್ರತಿಭೆಯನ್ನು ಪ್ರದರ್ಶಿಸುವಲ್ಲಿ ಯಶಸ್ವಿಯಾದರು.

ದೂರದ ಊರುಗಳಿಂದ ಬಂದಿದ್ದರೂ, ಯಾವುದೇ ದಣಿವಿಲ್ಲದೆ ಎಲ್ಲಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಕಬ್ ಬುಲ್‌ಬುಲ್‌ಗಳು ಭಾಗವಹಿಸಿದ್ದನ್ನು ನೋಡಿ ಸಂತೋಷ ಪಟ್ಟವರಲ್ಲಿ ನಾನೊಬ್ಬ. ಆಹ್ಲಾದಕರ ಹಾಗೂ ಹಸಿರು ತುಂಬಿದ ವಾತಾವರಣದೊಂದಿಗೆ, ಎನ್.ಎಂ.ಡಿ.ಸಿ. ಆಡಳಿತ ಮಂಡಳಿಯ ಸಂಪೂರ್ಣ ಸಹಾಯ, ಸಹಕಾರ, ನೆರವಿನೊಂದಿಗೆ 31ನೇ ರಾಜ್ಯ ಹಕ್ಕಿಗಳ - ಮರಿಗಳ ಉತ್ಸವ ಅತ್ಯಂತ ಯಶಸ್ವಿಯಾಗಿ ಜರುಗಿತು. ಉತ್ಸವದ ವಿವರವಾದ ಸಚಿತ್ರ ವರದಿಯನ್ನು ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ. ಉತ್ಸವದ ಯಶಸ್ಸಿಗೆ ಶ್ರಮಿಸಿದ ಬಳ್ಳಾರಿ ಜಿಲ್ಲಾಡಳಿತಕ್ಕೆ, ಎನ್.ಎಂ.ಡಿ.ಸಿ. ಸಂಸ್ಥೆಯ ಎಲ್ಲಾ ಹಿರಿಯ ಅಧಿಕಾರಿಗಳಿಗೆ, ಬಳ್ಳಾರಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಿಗೆ, ವಿಶೇಷವಾಗಿ ಹಗಲಿರುಳೂ ಶ್ರಮಿಸಿದ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಆರ್. ವೆಂಕಣ್ಣನವರಿಗೆ ನನ್ನ ಹೃತ್ಪೂರ್ವಕ ಅಭಿನಂದನೆ ಹಾಗೂ ಧನ್ಯವಾದಗಳು.

ಡಾ. ಅನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಅಕ್ಟೋಬರ್ 22 ರಿಂದ 31ರ ವರೆವಿಗೆ ರಾಜ್ಯ ಸಂಸ್ಥೆ ಏರ್ಪಡಿಸಿದ್ದ ಹಿಮಾಲಯ ವೃಕ್ಷಮಣಿ ತರಬೇತಿ ಶಿಬಿರಕ್ಕೆ 28 ರಂದು ಭೇಟಿ ನೀಡಿ ತರಬೇತಿಯಲ್ಲಿ ಭಾಗವಹಿಸಿದ್ದ 20 ಜಿಲ್ಲೆಗಳ 79 ಅಭ್ಯರ್ಥಿಗಳನ್ನು ಹಾಗೂ ತರಬೇತಿ ಶಿಬಿರಗಳ ನಾಯಕತ್ವ ವಹಿಸಿರುವ ಶ್ರೀ ಟಿ.ಎಸ್. ಲೂಕಾಸ್, ಶ್ರೀ ಬಿ.ಡಿ. ಫರ್ನಾಂಡಿಸ್, ಶ್ರೀಮತಿ ಹೇಮಾ ವಿಜಯಕುಮಾರ್ ಹಾಗೂ ಶಿಬಿರಕ್ಕೆ ಸಹಾಯಕರಾಗಿ ಆಗಮಿಸಿದ್ದ ಶ್ರೀ ಎಂ.ಎಂ. ಲೊಂಡೆ ಹಾಗೂ ಹಿರಿ-ಕಿರಿಯ ತರಬೇತುದಾರರನ್ನು ಮುಖತಃ ಭೇಟಿ ಮಾಡಿ, ನನ್ನ ಅನಿಸಿಕೆ - ಚಿಂತನೆಗಳನ್ನು ಅವರೊಂದಿಗೆ ಹಂಚಿಕೊಂಡಿದ್ದೇನೆ. ತರಬೇತಿ ಶಿಬಿರದಲ್ಲಿ ಭಾಗವಹಿಸಿದ ಎಲ್ಲಾ ಶಿಬಿರಾರ್ಥಿಗಳಿಗೆ ನನ್ನ ಹೃತ್ಪೂರ್ವಕ ಅಭಿನಂದನೆ ಸಲ್ಲಿಸಿದ್ದಲ್ಲದೆ, ಮುಂದಿನ 5 ವರ್ಷಗಳಲ್ಲಿ ಅವರುಗಳೆಲ್ಲರೂ ಸ್ಕೌಟ್, ಕಬ್ ವಿಭಾಗದಲ್ಲಿ ಲೀಡರ್ ಟ್ರೈನರ್ ಆಗಬೇಕೆಂದು ಕೋರಿದ್ದೇನೆ. ಶಿಬಿರವನ್ನು ಯಶಸ್ವಿಯಾಗಿ ನಡೆಸಲು ಸಹಕರಿಸಿದ ಜಿಲ್ಲೆಗಳಿಗೆ, ತರಬೇತಿ ನೀಡಲು ವಿವಿಧ ಜಿಲ್ಲೆಗಳಿಂದ ಆಗಮಿಸಿದ ಅನುಭವಿ ನಾಯಕರುಗಳಿಗೆ ಹಾಗೂ ಶಿಬಿರದ ಯಶಸ್ಸಿಗೆ ಸಹಕರಿಸಿದ ಎಲ್ಲರಿಗೂ ನನ್ನ ಹೃತ್ಪೂರ್ವಕ ಅಭಿನಂದನೆಗಳು.

ಸುವರ್ಣ ಕರ್ನಾಟಕ ವರ್ಷದ ರಾಜ್ಯೋತ್ಸವ ಆಚರಣೆ ಶುಭ ಸಂದರ್ಭದಲ್ಲಿ, ಸ್ಕೌಟ್-ಗೈಡ್ ಚಳವಳಿಗೆ ಏಳು ದಶಕಗಳಿಗೂ ಹೆಚ್ಚಿನ ನಿಷ್ಠಾಪೂರ್ಣ ಅನುಪಮ ಸೇವೆ ಸಲ್ಲಿಸಿದ ಕೆಳಕಂಡ ಇಬ್ಬರು ಈ

ವರ್ಷದ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ಕರ್ನಾಟಕ ಸರ್ಕಾರ ನೀಡಿರುವುದು ಅತ್ಯಂತ ಹೆಮ್ಮೆ ಹಾಗೂ ಅಭಿಮಾನದ ಸಂಗತಿಯಾಗಿದೆ. ಕರ್ನಾಟಕಕ್ಕೆ ವಿಶಿಷ್ಟ ಸೇವೆಯನ್ನು ಸಲ್ಲಿಸಿರುವ ಹಾಗೂ ಇಂದಿಗೂ ರಾಜ್ಯ ಸಂಸ್ಥೆಯ ಉಪಾಧ್ಯಕ್ಷಣೆಯಾಗಿ ಕಾರ್ಯನಿರ್ವಸುತ್ತಿರುವ ಕೊಡಗು ಜಿಲ್ಲೆಯ ಶ್ರೀಮತಿ ಎಂ.ಜಿ. ಬೋಪಯ್ಯ ಹಾಗೂ ಶಿವಮೊಗ್ಗ ಜಿಲ್ಲೆಯಲ್ಲಿ ಸ್ಕೌಟಿಂಗ್ - ಗೈಡಿಂಗ್ ಚಳವಳಿ ಬೆಳವಣಿಗೆಗೆ ಕಾರಣಕರ್ತರೂ ಹಾಗೂ ಈಗಾಗಲೇ ರಾಜ್ಯ ಸರ್ಕಾರ, ಕೇಂದ್ರ ಸರ್ಕಾರಗಳಿಂದ ಪ್ರಶಸ್ತಿ ಪುರಸ್ಕೃತರೂ ಆದ, ಶಿವಮೊಗ್ಗ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಟಿ.ವಿ. ನಾರಾಯಣ ಶಾಸ್ತ್ರಿಗಳು. ನವೆಂಬರ್ 1 ರಂದು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಜರುಗಿದ ವರ್ಣರಂಜಿತ ಸಮಾರಂಭದಲ್ಲಿ ಕರ್ನಾಟಕ ಸರ್ಕಾರ ಪ್ರತಿವರ್ಷ ನೀಡುವ ಅತ್ಯುನ್ನತ ರಾಜ್ಯೋತ್ಸವ ಪ್ರಶಸ್ತಿಯನ್ನು "ಸ್ಕೌಟ್ ಚಳವಳಿಯ ಶತಮಾನೋತ್ಸವ" ಆಚರಣೆಯ ಶುಭ ಸಂದರ್ಭದಲ್ಲಿ ಗೌರವಾನ್ವಿತ ರಾಜ್ಯಪಾಲರು ಹಾಗೂ ಕರ್ನಾಟಕ ಸರ್ಕಾರ ನೀಡಿರುವುದು ಅತ್ಯಂತ ಹೆಮ್ಮೆ ಹಾಗೂ ಅಭಿಮಾನದ ವಿಚಾರ. ರಾಜ್ಯದ ಎಲ್ಲಾ ಸ್ಕೌಟ್-ಗೈಡ್ ಕಾರ್ಯಕರ್ತರುಗಳ ಹಾಗೂ ರಾಜ್ಯ ಸಂಸ್ಥೆಯ ಪರವಾಗಿ ಸ್ಕೌಟ್-ಗೈಡ್ ಚಳವಳಿಯ ದೀವಿಗೆಯನ್ನು ಪ್ರಜ್ವಲಗೊಳಿಸುವಲ್ಲಿ ಏಳು ದಶಕಗಳ ಕಾಲ ನಿಸ್ವಾರ್ಥ ಮನೋಭೂಮಿಕೆಯೊಂದಿಗೆ ತೊಡಗಿಸಿಕೊಂಡಿರುವ ಸಂಸ್ಥೆಯ ಈ ಇಬ್ಬರು ಹಿರಿಯ ಚೇತನಗಳಿಗೆ ನನ್ನ ಗೌರವ ಪೂರ್ವಕ ನಮನಗಳು.

ದಿನಾಂಕ 28 ರಂದು ಡಾ. ಅನಿಬೆಸೆಂಟ್ ತರಬೇತಿ ಕೇಂದ್ರದ ಅಭಿವೃದ್ಧಿ ಸಮಿತಿಯ ಸಭೆ ಜರುಗಿತು. ಸೆಪ್ಟೆಂಬರ್ 18 ರಂದು ರಾಜಭವನದಲ್ಲಿ ಜರುಗಿದ ಗೌರವಾನ್ವಿತ ರಾಜ್ಯಪಾಲರನ್ನು ರಾಜ್ಯ ಸಂಸ್ಥೆಯ "ಪೋಷಕರನ್ನಾಗಿ" ಮಾಡಿಕೊಂಡ ಸಮಾರಂಭದಲ್ಲಿ, ಘನತವೆತ್ತ ರಾಜ್ಯಪಾಲರು ಡಾ. ಅನಿಬೆಸೆಂಟ್ ಪಾರ್ಕ್‌ನ್ನು ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದ ತರಬೇತಿ ಕೇಂದ್ರವಾಗಿ ನಿರ್ಮಾಣ ಮಾಡಲು ಸೂಚಿಸಿದ ಮೇರೆಗೆ, ಈಗಾಗಲೇ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಕಾರ್ಯದರ್ಶಿಗಳು ತರಬೇತಿ ಶಿಬಿರಕ್ಕೆ ಭೇಟಿ ನೀಡಿ ಅವಶ್ಯವಾಗಿ ಆಗಬೇಕಾಗಿರುವ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಬಗ್ಗೆ ಚರ್ಚಿಸಿ ಸೂಚಿಸಿರುವುದನ್ನು ಆಧರಿಸಿ ತಯಾರಿಸಿರುವ ತರಬೇತಿ ಶಿಬಿರದ ಮಾಸ್ಟರ್ ಫ್ಲಾನ್ ಯೋಜನೆಯ ವಿವರಗಳನ್ನು ಅಭಿವೃದ್ಧಿ ಸಮಿತಿ ಸಭೆಯಲ್ಲಿ ಪರಿಶೀಲಿಸಿ ಸಭೆಯಲ್ಲಿ ಸೂಚಿಸಿದ ಹೆಚ್ಚಿನ ಅನುಕೂಲ ಅವಶ್ಯಕತೆಗಳನ್ನು ಗಮನದಲ್ಲಿಟ್ಟುಕೊಂಡು ಮುಂದಿನ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಚರ್ಚಿಸಿ ಸರ್ಕಾರ ಹಾಗೂ ಗೌರವಾನ್ವಿತ ರಾಜ್ಯಪಾಲರಿಗೆ ಸಲ್ಲಿಸಲು ಸೂಚಿಸಲಾಯಿತು.

1ನೇ ನವೆಂಬರ್ 2007 ರಂದು ಕನ್ನಡ ರಾಜ್ಯೋತ್ಸವವನ್ನು ಕರ್ನಾಟದಾದ್ಯಂತ ಅತ್ಯಂತ ಸಂಭ್ರಮ, ಸಡಗರ, ಉತ್ಸಾಹಗಳಿಂದ ಆಚರಿಸುತ್ತಲಿದ್ದು, ಸಮಸ್ತರಿಗೂ ರಾಜ್ಯೋತ್ಸವದ ಶುಭಾಶಯಗಳನ್ನು ಸಲ್ಲಿಸುತ್ತೇನೆ. ಮುಂಬರುವ ದೀಪಾವಳಿಯು ಸ್ಕೌಟ್ಸ್-ಗೈಡ್ಸ್ ಚಳವಳಿಯಲ್ಲಿ ಸೇವೆ ಸಲ್ಲಿಸುತ್ತಿರುವ ಎಲ್ಲಾ ಕಾರ್ಯಕರ್ತರುಗಳಿಗೂ ಸಕಲ ಸನ್ಮಂಗಳವನ್ನು ಉಂಟು ಮಾಡಲಿ ಎಂದು ಭಾಗವಂತನಲ್ಲಿ ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ



# ಹಾರ್ದಿಕ ಅಭಿನಂದನೆಗಳು

2007ನೇ ಸಾಲಿನ **ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾಗಿರುವ**
**ಶ್ರೀಮತಿ ಎಂ.ಜಿ. ಬೋಪಯ್ಯ**ಯವರಿಗೆ ಕರ್ನಾಟಕದ ಸಮಸ್ತ ಸ್ಕೌಟ್, ಗೈಡ್ ವೃಂದ
ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

**ಶ್ರೀಮತಿ ಎಂ.ಜಿ. ಬೋಪಯ್ಯ** ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

1929 ರಿಂದಲೇ ಪ್ರಾಥಮಿಕ 2ನೇ ತರಗತಿಯಿಂದ ಗೈಡ್ ಚಳವಳಿಗೆ ಪಾದಾರ್ಪಣೆ. 1978ರಲ್ಲಿ ರೇಂಜರ್ ಆಗಿ ತರಬೇತಿ ನಂತರ ಆಯುಕ್ತರ ಮೂಲ ತರಬೇತಿ ಹಾಗೂ ಮುಂದುವರೆದ ತರಬೇತಿಗಳು. ಅಮೇರಿಕಾದಲ್ಲಿ ಡೈಸಿ. ನಾಯಕಿ ತರಬೇತಿ. ಅನೇಕ ಜಾಂಬೂರಿಗಳಲ್ಲಿ ಸಕ್ರೀಯ ಪಾತ್ರ. ಕೊಡಗು ಜಿಲ್ಲೆಯ ಜಿಲ್ಲಾ ಆಯುಕ್ತರಾಗಿ 30 ವರ್ಷಗಳಿಗೂ ಹೆಚ್ಚು ಕಾಲ ಸೇವೆ. ಕರ್ನಾಟಕ ರಾಜ್ಯದ ರೇಂಜರ್ ವಿಭಾಗದ ಸಹಾಯಕ ರಾಜ್ಯ ಆಯುಕ್ತರಾಗಿ ಸೇವೆ. 6 ವರ್ಷಗಳ ಕಾಲ ರಾಜ್ಯ ಗೈಡ್ ಆಯುಕ್ತರಾಗಿ ಅನುಪಮ ಸೇವೆ. ರಾಷ್ಟ್ರೀಯ ಕಾರ್ಯಕಾರಿ ಸಮಿತಿಗೆ ಮೂರು ಬಾರಿ ಆಯ್ಕೆ. ರಾಷ್ಟ್ರೀಯ ಸಂಸ್ಥೆಯ ಉಪಾಧ್ಯಕ್ಷಿಣಿಯಾಗಿ ಸ್ಮರಣೀಯ ಸೇವೆ.

<u>ಪ್ರಶಸ್ತಿಗಳು</u>

ಸಣ್ಣ ಉಳಿತಾಯ ಹಾಗೂ ಸಮಾಜ ಕಲ್ಯಾಣಕ್ಕಾಗಿ "ಮೈಸೂರು ದಸರಾ ಪ್ರಶಸ್ತಿ". ಕರ್ನಾಟಕ ರಾಜ್ಯದಲ್ಲಿ ಸಹಕಾರಿ ಚಳುವಳಿಗಾಗಿ "ಸಹಕಾರಿ ಶಿಲ್ಪ" ಪ್ರಶಸ್ತಿ. ಅಮೇರಿಕಾದ "ಡೇರಿಯನ್ ನಗರದ ಪ್ರಜೆಯಾಗಿ" ಗೌರವ ಪ್ರದಾನ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಅತ್ಯುನ್ನತ ಪ್ರಶಸ್ತಿಯಾದ 'ಬೆಳ್ಳಿ ಆನೆ' ಪ್ರಶಸ್ತಿ. ವಿಶ್ವ ಗೈಡ್ ಸಂಸ್ಥೆ (WAGGS) ಪ್ರಧಾನ ಮಾಡಿದ ಏಷಿಯಾ ಫೆಸಿಫಿಕ್ ವಯಸ್ಕ ನಾಯಕಿ ಸಾಧನೆಯ ಅತ್ಯುನ್ನತ ಪ್ರಶಸ್ತಿ ಪ್ರಶಸ್ತಿ.

---



2007ನೇ ಸಾಲಿನ **ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾಗಿರುವ**
**ಶ್ರೀ ಟಿ.ವಿ. ನಾರಾಯಣಶಾಸ್ತ್ರಿ**ಯವರಿಗೆ
ಕರ್ನಾಟಕದ ಸಮಸ್ತ ಸ್ಕೌಟ್, ಗೈಡ್ ವೃಂದ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

**ಶ್ರೀ ಟಿ.ವಿ. ನಾರಾಯಣಶಾಸ್ತ್ರಿ**, ಜಿಲ್ಲಾ ಮುಖ್ಯ ಆಯುಕ್ತರು, ಶಿವಮೊಗ್ಗ

ದಿ. ವೆಂಕಟಸುಬ್ಬಾಶಾಸ್ತ್ರಿಗಳ ಪುತ್ರರಾದ ಇವರು ಬಾಲ್ಯದಲ್ಲಿ ಕಬ್ ಆಗಿದ್ದರು. ಇವರ ತಂದೆಯವರು ಶಿವಮೊಗ್ಗ ಜಿಲ್ಲಾ ಆಯುಕ್ತರಾಗಿ ಅನೇಕ ವರ್ಷಗಳ ಸಾರ್ಥಕ ಸೇವೆ ಸಲ್ಲಿಸಿ ಚಳವಳಿ ಜಿಲ್ಲೆಯಲ್ಲಿ ಹರಡಲು ಕಾರಣಕರ್ತರು. ರೋವರ್ ಆಗಿ ಅನೇಕ ಸಾಮಾಜಿಕ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿರುತ್ತಾರೆ. ಈ ಹಿಂದೆ ಹಲವು ವರ್ಷಗಳು ಶಿವಮೊಗ್ಗಾ ಜಿಲ್ಲೆಯ ಜಿಲ್ಲಾ ಆಯುಕ್ತರಾಗಿ ಅನುಪಮ ಸೇವೆ. ಅಣ್ಣಂದಿರಾದ ಶ್ರೀ ಟಿ.ವಿ. ವೆಂಕಟರಾಮಾಶಾಸ್ತ್ರಿಯವರ ಪತ್ನಿ ಶ್ರೀಮತಿ ಶ್ರೀಲಕ್ಷ್ಮಿ ಶಾಸ್ತ್ರಿರವರೂ ಸಹ ಗೈಡ್ ಆಯುಕ್ತೆಯಾಗಿದ್ದರು. ಒಟ್ಟಿನಲ್ಲಿ ಇವರದು ಸ್ಕೌಟ್ ಕುಟುಂಬ. ಕಳೆದ 75 ವರ್ಷಗಳಿಂದ ಶಿವಮೊಗ್ಗದ ಸ್ಕೌಟ್-ಗೈಡ್ ಚಳವಳಿಗೆ ಇವರ ಕುಟುಂಬ ಅನುಪಮ ಸೇವೆ ಸಲ್ಲಿಸಿದ್ದಾರೆ.

<u>ಪ್ರಶಸ್ತಿಗಳು</u>

2006ನೇ ಸಾಲಿನಲ್ಲಿ ಕೈಗಾರಿಕಾ ಕ್ಷೇತ್ರದಲ್ಲಿ ಇವರು ಸಲ್ಲಿಸಿದ ವಿಶಿಷ್ಠ ಸೇವೆಗಾಗಿ ಕರ್ನಾಟಕ ಸರ್ಕಾರದ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ವತಿಯಿಂದ "ಕರ್ನಾಟಕದ ಪ್ರತಿಷ್ಠಿತ ಕೈಗಾರಿಕೋದ್ಯಮಿ" ಪ್ರಶಸ್ತಿ ಪ್ರಧಾನ. ಇವರನ್ನು ಶಿವಮೊಗ್ಗಾದ "ಕೈಗಾರಿಕೆಗಳ ಪಿತಾಮಹ" ಎಂದು ಇಂದಿಗೂ ಕರೆಯುತ್ತಾರೆ. ರೋಟರಿ ಅಂತರ ರಾಷ್ಟ್ರೀಯ ಶತಮಾನೋತ್ಸವ ವರ್ಷದಲ್ಲಿ ಅತ್ಯುತ್ತಮ ವೃತ್ತಿ ಪರತೆಗಾಗಿ ಸೇವಾ ಪ್ರಶಸ್ತಿ ವಿತರಣೆ. ಚಳವಳಿಗೆ ಸಲ್ಲಿಸಿದ ವಿಶಿಷ್ಟ ಸೇವೆಯನ್ನು ಗುರುತಿಸಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಅತಿ ಉನ್ನತ ರಾಷ್ಟ್ರೀಯ ಪುರಸ್ಕಾರ "ಬೆಳ್ಳಿ ಆನೆ" ಪದಕ ಪ್ರಶಸ್ತಿಯನ್ನು 2002ರಲ್ಲಿ ಪ್ರಧಾನ ಮಾಡಲಾಯಿತು.

# 31st State Level Cubs & Bul Buls Utsav held at Donimalai, Bellary District from 14th to 17th October 2007

*The 31st State Level Cubs & Bul Buls Utsav was held at the Campus of the Donimalai Iron Ore Mine Township Sandur Taluk, Bellary District from 14th to 17th October, 2007.*

*Nearly 600 cubs, Bul Buls, and the Unit Leaders attended the Event. Guest Contingents from, Kerala, Tamilnadu and the Southern Railway States also participated in the State Level Event.*

*National Mineral Development Corporation Ltd, Donimalai, Govt, of India Undertaking, Sponsored the Event.*

## Inauguration

*Sri N.K. Nanda, General Manager, Donimalai Iron Ore Mine, NMDC, Inaugurated the Utsav on 14th October, 2007.*

*Sri Kondajji B. Shanmukhappa, State Chief Commissioner, presided over the Inaugural Function, Sri T. Ramakrishna. Additional General Manager, Donimalai Iron Ore Mine, Sri Gopala Swamy, Sri Rajendra Prasad, Employees Union General Secretaries, Senior Managers, DIDM from various wings, were present. Sri R. Venkanna, Dist. Chief Commissioner, Dr. Tekur Ramanath, Smt. Shantha Lakshmi Jayaram, District Commissioners were also present.*

## "Chiguru Chetana" Souvenir

*Sri N. K. Nanda, General Manager released the "Chiguru Chetana" Souvenir Edited by Sri M.A. Chellaiah, Headquarters Commissioner (Publication) on this occasion. Earlier Sri Chinnaswamy Reddy, District Secretary, Bellary Welcomed the Guests and the participants. Smt. Geetha Nataraj, Joint Secretary (G) Proposed the vote of thanks.*

## Inauguration of Activities

*The Mini Olympic activities was inaugurated by Sri S.K. Varma, Additional General Manager, DIOM, on 15-10-2007*

## Folk Dance Programme

*Smt. Sagarika Nanda, W/o. Sri N.K. Nanda, General Manager, Inaugurated the Folk Dance programme*

*on 15-10-2007. Sri Bose, Additional General Manager, DIOM was present.*

## Valedictory Function

*Sri K.S.L. Swamy, M.L.C. Sandur was the Chief Guest on 17th October at the Valedictory Function and distributed the Certificates to the cubs and bul buls and Mementos to the participating Districts.*

## Visit

*The Cubs and Bulbuls visited Hampi, T.B. Dam and Pampavana on 17th October on their return Journey.*

*This State Level Event was successfully organised with the Co-operation and Support of Sri Aravind Srivatsav, I.A.S., Deputy Commissioner, Bellary and NMDC Authorities.*

## Scouts / Guides participated in JOTA held SHQ

*Over 500 cubs, bulbuls, Scouts and Guides, Unit Leaders participated in the 50th Year of Jamboree - on - the Air held at State Headquarters, Bharat Scouts and Guides, Bangalore from 19th to 21st October, 2007*

*They exchanged views with their counterparts throughout the World with the help of Ham Radio. This helped in building up World Brotherhood and Sisterhood. Bangalore Amature Radio Club setup the Ham Radio Station at the State Headquarters. Lion Ajay, Secretary BARC along with his team mebers helped in setting up the Ham Station and run it very successfully.*

*A special postal Cover and Special Cancellation Cover was released by Sri Xavier, Deputy Chief Post Master, G.P.O. Bangalore on the occasion of Scout Centenary 2007 and 50th Anniversary of Jamboree -on-the Air (JOTA) on 20th October, 2007, at the General Post Office Bangalore.*

*Sri Unnikrishna Nayar, Chairman, LISC India Chapter, received the special Postal Cover.*

*Sri N. Srinivasan, Smt. Geetha Nataraj, Joint State Secretaries, Sri M.A. Chellaiah, Headquarters Commissioner, Sri Narayana Setty, State Organising Commissioner (S), Unti Leaders, Parents were present on the occassion.*

*Sri. A.M. Shankar, ASOC (S) Co-ordinated the Programme.*

# 89ನೇ ರಾಜ್ಯ ಪರಿಷತ್ ಸಭೆ

ದಿನಾಂಕ 30-9-2007 ರಂದು ರಾಜ್ಯ ತರಬೇತಿ ಕೇಂದ್ರ ಡಾ|| ಅನಿಬೆಸೆಂಟ್ ಪಾರ್ಕ್‌ನಲ್ಲಿ 89ನೇ ರಾಜ್ಯ ಪರಿಷತ್ ಸಾಮಾನ್ಯ ಸಭೆ ಜರುಗಿತು. ಮಾನ್ಯ ಶ್ರೀಎನ್. ಧರ್ಮಸಿಂಗ್, ಮಾಜಿ ಮುಖ್ಯಮಂತ್ರಿ ಹಾಗೂ ಅಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆ ಇವರು ಅಧ್ಯಕ್ಷತೆ ವಹಿಸಿ ಸಭೆಯ ಕಾರ್ಯಕಲಾಪಗಳನ್ನು ನಡೆಸಿಕೊಟ್ಟರು. ಸಂಸ್ಥೆಯ ಬೆಳವಣಿಗಾಗಿ ಅನೇಕ ಉಪಯುಕ್ತ ವಿಷಯಗಳ ಬಗ್ಗೆ ಚರ್ಚಿಸಲಾಯಿತು.

## ಉತ್ತಮ ಕಾರ್ಯ ಹಾಗೂ ಸಂಘಟನೆಗಾಗಿ ರಾಜ್ಯ ಮಟ್ಟದ ಮತ್ತು ವಿಭಾಗ ಮಟ್ಟದ ಪ್ರಶಸ್ತಿಗಳು ಕೆಳಕಂಡ ಜಿಲ್ಲೆಗಳಿಗೆ ನೀಡಲಾಯಿತು.

ಉತ್ತಮ ಕಾರ್ಯ ಹಾಗೂ ಸಂಘಟನೆಗಾಗಿ ರಾಜ್ಯ ಮಟ್ಟದ ಮತ್ತು ವಿಭಾಗ ಮಟ್ಟದ ಪರ್ಯಾಯ ಫಲಕ ಹಾಗೂ ಪಾರಿತೋಷಕಗಳನ್ನು ವಿವಿಧ ಜಿಲ್ಲೆಗಳಿಗೆ ಪ್ರಧಾನ ಮಾಡಲಾಯಿತು. ವಿವರಗಳು ಕೆಳಗಿನಂತಿವೆ.

### ರಾಜ್ಯ ಮಟ್ಟದ ಪರ್ಯಾಯ ಫಲಕಗಳು

ಅಬ್ದುಲ್ ಗಫಾರ್ ಪರ್ಯಾಯ ಫಲಕ - ದಕ್ಷಿಣ ಕನ್ನಡ
(ರಾಜ್ಯದ 1ನೇ ಅತ್ಯುತ್ತಮ ಜಿಲ್ಲೆ)

ಜಸ್ಟೀಸ್ ಕೆ. ಶಂಕರನಾರಾಯಣ ರಾವ್ ಪರ್ಯಾಯ ಫಲಕ - ಬೆಳಗಾಂ
(ರಾಜ್ಯದ 2ನೇ ಅತ್ಯುತ್ತಮ ಜಿಲ್ಲೆ)

ಡಾ|| ವೈ.ವಿ.ಕೆ. ಮೂರ್ತಿ ಪರ್ಯಾಯ ಫಲಕ - ದಾವಣಗೆರೆ
(ರಾಜ್ಯದ 3ನೇ ಅತ್ಯುತ್ತಮ ಜಿಲ್ಲೆ)

### ವಿಭಾಗ ಮಟ್ಟದ ಪ್ರಶಸ್ತಿಗಳು

**ಬೆಂಗಳೂರು ವಿಭಾಗ**

ವಿ.ಪಿ. ದೀನದಯಾಳು ನಾಯ್ಡು ಪರ್ಯಾಯ ಫಲಕ

- ಪ್ರಥಮ ಸ್ಥಾನ - ಬೆಂಗಳೂರು ಉತ್ತರ
- ದ್ವಿತೀಯ ಸ್ಥಾನ - ಚಿತ್ರದುರ್ಗ
- ತೃತೀಯ ಸ್ಥಾನ - ತುಮಕೂರು

**ಮೈಸೂರು ವಿಭಾಗ**

ಜೆ.ಬಿ. ಮಲ್ಲಾರಾಧ್ಯ ಪರ್ಯಾಯ ಫಲಕ

- ಪ್ರಥಮ ಸ್ಥಾನ - ಉಡುಪಿ

- ದ್ವಿತೀಯ ಸ್ಥಾನ - ಹಾಸನ
- ತೃತೀಯ ಸ್ಥಾನ - ಚಿಕ್ಕಮಗಳೂರು

ಬೆಳಗಾಂ ವಿಭಾಗ

ಕೊಂಡಜ್ಜಿ ಬಸಪ್ಪ ಪರ್ಯಾಯ ಫಲಕ

- ಪ್ರಥಮ ಸ್ಥಾನ - ಹಾವೇರಿ
- ದ್ವಿತೀಯ ಸ್ಥಾನ - ಧಾರವಾಡ
- ತೃತೀಯ ಸ್ಥಾನ - ಬಿಜಾಪುರ

ಗುಲ್ಬರ್ಗಾ ವಿಭಾಗ

ಪ್ರೊ. ಪಿ. ಶಿವಶಂಕರ್ ಪರ್ಯಾಯ ಫಲಕ

- ಪ್ರಥಮ ಸ್ಥಾನ - ಬಳ್ಳಾರಿ
- ದ್ವಿತೀಯ ಸ್ಥಾನ - ಕೊಪ್ಪಳ
- ತೃತೀಯ ಸ್ಥಾನ - ಬೀದರ್

ಸಹಿ/-

ರಾಜ್ಯ ಕಾರ್ಯದರ್ಶಿ

## INDIA OF MY DREAMS

*I shall work for an India in which the poorest shall feel that it is their country, in whose making they have an effective coive, an India in which there shall be no high class and low class of people; an India in which all communities shall live in perfect harmony there can be no room in such an india for the curse of untouchability, or the curse of intoxicating drinks and drugs, women will enjoy the same rights as men we shall be at peace with all the rest of the world. this is the India of my dreams*

***Mahatma Gandhi***

# 31ನೇ ರಾಜ್ಯ ಮಟ್ಟದ ಕಬ್ ಮತ್ತು ಬುಲ್‌ಬುಲ್ ಉತ್ಸವ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ 31ನೇ ಕಬ್ಸ್ ಮತ್ತು ಬುಲ್‌ಬುಲ್ ಉತ್ಸವ ದಿನಾಂಕ : 14-10-2007 ರಿಂದ 17-10-2007ರ ವರೆಗೆ ಬಳ್ಳಾರಿ ಜಿಲ್ಲೆಯ ದೋಣಿಮಲೈನಲ್ಲಿ ರಾಷ್ಟ್ರೀಯ ಖನಿಜಾಭಿವೃದ್ಧಿ ಸಂಸ್ಥೆ (*National Minaral Development Corporation*) ರಾಜ್ಯ ಸಂಸ್ಥೆ ಹಾಗೂ ಬಳ್ಳಾರಿ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿತು.

ಉದ್ಘಾಟನೆ : ದಿನಾಂಕ 14-10-2007 ರಂದು ಸಂಜೆ 5-00 ಘಂಟೆಗೆ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರ ಅಧ್ಯಕ್ಷತೆಯಲ್ಲಿ ರಾಷ್ಟ್ರೀಯ ಖನಿಜಾಭಿವೃದ್ಧಿ ಸಂಸ್ಥೆಯ ಪ್ರಧಾನ ವ್ಯವಸ್ಥಾಪಕರಾದ ಶ್ರೀ ಎನ್.ಕೆ. ನಂದಾರವರು ಉತ್ಸವವನ್ನು ಉದ್ಘಾಟಿಸಿ ವಿದ್ಯಾರ್ಥಿಗಳನ್ನು ಉತ್ತಮ ಪ್ರಜೆಗಳನ್ನಾಗಿ ರೂಪಿಸುವಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಸಹಕಾರಿಯಾಗಿದೆ. ಶಿಸ್ತು, ಸಂಯಮ, ಸಮಾಜ ಸೇವೆ, ಸ್ವಾವಲಂಬನೆ ಮುಂತಾದ ಸದ್ಗುಣಗಳನ್ನು ಬೆಳೆಸಿ ಅವರಲ್ಲಿರುವ ಸುಪ್ತ ಪ್ರತಿಭೆಯನ್ನು ಹೊರ ತರಲು ಪ್ರಯೋಜನಕಾರಿಯಾಗಿದೆ ಎಂದು ನುಡಿದರು ಹಾಗೂ ಇದೇ ಸಂದರ್ಭದಲ್ಲಿ "ಚಿಗುರು ಚೇತನ" ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಿದರು.

ರಾಜ್ಯ ಮುಖ್ಯ ಆಯುಕ್ತರು ಮಾತನಾಡುತ್ತಾ ವಿಶ್ವ ಸ್ಕೌಟ್ ಶತಮಾನೋತ್ಸವ ಆಚರಿಸುತ್ತಿರುವ ಈ ವರ್ಷದಲ್ಲಿ ಈ ಉತ್ಸವ ಸ್ಮರಣೀಯವಾಗಿದೆ ಎಂದರು ಜಂಟಿ ಪ್ರಧಾನ ವ್ಯವಸ್ಥಾಪಕರಾದ ಶ್ರೀ ಟಿ. ರಾಮಕೃಷ್ಣ, ಶ್ರೀ ರಾಜೇಂದ್ರ ಪ್ರಸಾದ್, ಯೂನಿಯನ್ ಕಾರ್ಯದರ್ಶಿ, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಆರ್. ವೆಂಕಣ್ಣ, ಜಿಲ್ಲಾ ಆಯುಕ್ತರುಗಳಾದ ಶ್ರೀ ಠೇಕೂರ್ ರಾಮನಾಥ, ಶ್ರೀಮತಿ ಶಾಂತಲಕ್ಷ್ಮೀ ಜಯರಾಂ ಇತರ ಪದಾಧಿಕಾರಿಗಳು ಉಪಸ್ಥಿತರಿದ್ದರು ಪ್ರಾರಂಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಚಿನ್ನಸ್ವಾಮಿ ರೆಡ್ಡಿ ಎಲ್ಲರನ್ನು ಸ್ವಾಗತಿಸಿದರು.

ನೆರೆ ರಾಜ್ಯಗಳಾದ ಕೇರಳ, ತಮಿಳುನಾಡು, ದಕ್ಷಿಣ ರೈಲ್ವೆಗಳಿಂದ ಆಗಮಿಸಿದ್ದ ಅತಿಥಿ ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳಿಂದ ಸಾಂಸ್ಕೃತಿಕ ಕಾರ್ಯಕ್ರಮ ಜರುಗಿತು.

ಒಲಂಪಿಕ್ ಆಟ : ದಿನಾಂಕ 15-10-2007 ರಂದು ಶ್ರೀ ಎಸ್.ಕೆ. ವರ್ಮ ಜಂಟಿ ಪ್ರಧಾನ ವ್ಯವಸ್ಥಾಪಕರು ಮೈನಿಂಗ್ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಪುಟಾಣಿಗಳಿಗಾಗಿ ಏರ್ಪಡಿಸಿದ ಒಲಂಪಿಕ್ ಆಟಗಳನ್ನು ಉದ್ಘಾಟಿಸಿ ಮಕ್ಕಳು ಚಿಕ್ಕಂದಿನಿಂದಲೇ ದೇಹಾರೋಗ್ಯ ಮತ್ತು ದೈಹಿಕ ಬೆಳವಣಿಗೆಗಾಗಿ ಕ್ರೀಡೆಗಳನ್ನು ಅಭ್ಯಾಸ ಮಾಡಬೇಕೆಂದು ನುಡಿದರು. ಈ ಸಂದರ್ಭದಲ್ಲಿ ರಾಷ್ಟ್ರೀಯ ಅದಿರು ಅಭಿವೃದ್ಧಿ ನಿಗಮದ ಪದಾಧಿಕಾರಿಗಳು ರಾಜ್ಯ ಮುಖ್ಯ ಆಯುಕ್ತರು ಉಪಸ್ಥಿತರಿದ್ದು ಸಾಹಸ ಚಟುವಟಿಕೆಗಳನ್ನು ಉದ್ಘಾಟಿಸಿ ವೀಕ್ಷಿಸಿದರು.

ಸಾಹಸ ಚಟುವಟಿಕೆ : ನೋಪಾಸನ ಸಂಸ್ಥೆಯ ನಿರ್ದೇಶಕ ಶ್ರೀ ಷಖೀಬ್ ಹಾಗೂ ತಂಡದ ಸದಸ್ಯರು ವಿವಿಧ ಸಾಹಸ ಚಟುವಟಿಕೆಗಳನ್ನು ಏರ್ಪಡಿಸಿದ್ದರು.

ಕರಕುಶಲ ತಯಾರಿ : ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಕರಕುಶಲ

ಕಾರ್ಯಕ್ರಮವನ್ನು ಉದ್ಘಾಟಿಸಿ ಮಕ್ಕಳ ಕೌಶಲ್ಯಗಳ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸಿ ಚಳುವಳಿಯ ಸರ್ವತೋಮುಖ ಬೆಳವಣಿಗೆಗೆ ಎಲ್ಲರೂ ಶ್ರಮಿಸುವಂತೆ ಹಾರೈಸಿದರು.

ವಸ್ತು ಪ್ರದರ್ಶನ : ಪುಟಾಣಿಗಳು ತಯಾರಿಸಿದ ಹಲವಾರು ಕರಕುಶಲ ವಸ್ತುಗಳನ್ನು ಪ್ರದರ್ಶನಕ್ಕೆ ಇಡಲಾಯಿತು. ದೋಣಿಮಲೈ ನಾಗರೀಕರು ವೀಕ್ಷಿಸಿ ಮೆಚ್ಚುಗೆ ವ್ಯಕ್ತಪಡಿಸಿದರು.

ಪಥಚಲನೆ : ಶ್ರೀಮತಿ ಜಯಶ್ರೀ, ಲೀಡರ್ ಟ್ರೈನರ್ (ಬುಲ್‌ಬುಲ್) ಇವರು ಹಸಿರು ನಿಶಾನೆಯೊಂದಿಗೆ ಪಥಚಲನೆ ಉದ್ಘಾಟಿಸಿ ಶುಭಕೋರಿದರು. ಶ್ರೀಮತಿ ಹೇಮಾವಿಜಯಕುಮಾರ್ ಎಲ್.ಟಿ.(ಸಿ) ಇವರ ನಾಯಕತ್ವದಲ್ಲಿ ಊರಿನ ಪ್ರಮುಖ ಬೀದಿಗಳಲ್ಲಿ ಪಥಚಲನೆ ಘೋಷಣೆಗಳೊಂದಿಗೆ ಯಶಸ್ವಿಯಾಗಿ ಜರುಗಿತು.

ಜಾನಪದ ನೃತ್ಯ : ಸಂಜೆ 8.30ಕ್ಕೆ ಶ್ರೀಮತಿ ಸಾಗರೀಕ ನಂದಾರವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಜಾನಪದ ನೃತ್ಯ ಕಾರ್ಯಕ್ರಮವನ್ನು ಉದ್ಘಾಟಿಸಿ ಶುಭ ಕೋರಿದರು. ಶ್ರೀ ಎನ್.ಕೆ. ನಂದಾ, ಶ್ರೀ ಟಿ. ರಾಮಕೃಷ್ಣ, ಶ್ರೀ ಎಸ್.ಕೆ. ವರ್ಮ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಇತರ ಪದಾಧಿಕಾರಿಗಳು ಉಪಸ್ಥಿತರಿದ್ದರು.

ಮಕ್ಕಳ ರಂಗ ಮಂದಿರ : ದಿನಾಂಕ 16-10-2007 ರಂದು ಬೆಳಗ್ಗೆ ಶ್ರೀ ಆರ್. ವೆಂಕಣ್ಣ, ಜಿಲ್ಲಾ ಮುಖ್ಯ ಆಯುಕ್ತರು ಮಕ್ಕಳ ರಂಗ ಮಂದಿರ ಕಾರ್ಯಕ್ರಮ ಉದ್ಘಾಟಿಸಿ ಮಕ್ಕಳಲ್ಲಿರುವ ಪ್ರತಿಭೆಗಳನ್ನು ಹೊರಹೊಮ್ಮಿಸಲು ಇಂತಹ ಕಾರ್ಯಕ್ರಮಗಳು ಸಹಕಾರಿಯಾಗಿದೆ ಎಂದರು.

ಕಬ್ಸ್ ಹಾಗೂ ಬುಲ್‌ಬುಲ್ಸ್‌ಗಳು ಕಾಡುಕುಣಿತ ಮತ್ತು ತಾರಾ ಕಥೆಗಳನ್ನು ಅಭಿನಯದ ಮೂಲಕ ಪ್ರದರ್ಶಿಸಿದರು.

ಕೆಂಪು ಗುಲಾಬಿ : ಸಂಜೆ 6-00 ಘಂಟೆಗೆ ಶ್ರೀ ಕೆ.ಎನ್. ನಂದಾರವರು ಮುಖ್ಯ ಅತಿಥಿಗಳಾಗಿ ಆಗಮಿಸಿ 'ಕೆಂಪು ಗುಲಾಬಿ' (ಶಿಬಿರಾಗ್ನಿ) ಕಾರ್ಯಕ್ರಮವನ್ನು ಉದ್ಘಾಟಿಸಿದರು ಮಕ್ಕಳು ವಿವಿಧ ವೇಶ ಭೂಷಣಗಳೊಂದಿಗೆ ಕಾರ್ಯಕ್ರಮ ಪ್ರದರ್ಶಿಸಿದರು. ಎಲ್ಲಾ ಪದಾಧಿಕಾರಿಗಳು, ನಗರದ ನಾಗರೀಕರು ಆಗಮಿಸಿ ಕಾರ್ಯಕ್ರಮ ವೀಕ್ಷಿಸಿದರು.

ಸರ್ವಧರ್ಮ ಪ್ರಾರ್ಥನೆ : ದಿನಾಂಕ 17-10-2007 ರಂದು ಬೆಳಗ್ಗೆ ಸರ್ವಧರ್ಮ ಪ್ರಾರ್ಥನೆ ಶ್ರೀಮತಿ ಕೆ.ವಿ. ಶ್ಯಾಮಲ ಇವರ ನೇತೃತ್ವದಲ್ಲಿ ಜರುಗಿತು.

ಸಮಾರೋಪ ಸಮಾರಂಭ : 11.30ಕ್ಕೆ ಉತ್ಸವ ಸಮಾರೋಪ ಸಮಾರಂಭ ಶ್ರೀ ಆರ್. ವೆಂಕಣ್ಣ, ಜಿಲ್ಲಾ ಮುಖ್ಯ ಆಯುಕ್ತರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಕೆ.ಎಸ್.ಎಲ್. ಸ್ವಾಮಿ ಮಾನ್ಯ ವಿಧಾನ ಪರಿಷತ್ ಸದಸ್ಯರು, ಸಂಡೂರು ಇವರು ವಿಶೇಷ ಆಹ್ವಾನಿತರಾಗಿ ಆಗಮಿಸಿ ಮಕ್ಕಳಿಗೆ ಪ್ರಮಾಣ ಪತ್ರ ಹಾಗೂ ಜಿಲ್ಲೆಗಳಿಗೆ ನೆನಪಿನ ಕಾಣಿಕೆ ನೀಡಿ ಮಾತನಾಡುತ್ತಾ ಚಿಕ್ಕವಯಸ್ಸಿನಲ್ಲಿಯೇ ಶಿಸ್ತು, ಸೇವಾ ಮನೋಭಾವನೆ, ಧೈರ್ಯ ಹಾಗೂ ಚಟುವಟಿಕೆಗಳಲ್ಲಿ ಭಾಗವಹಿಸಿ ಅನುಭವಗಳನ್ನು ಹಂಚಿಕೊಂಡಿರುತ್ತೀರಿ. ಇಂತಹ ಕಾರ್ಯಕ್ರಮ ದೋಣಿಮಲೈನಲ್ಲಿ ನಡೆಯುತ್ತಿರುವುದು ನನಗೆ ಸಂತೋಷ ತಂದಿದೆ ಎಂದರು. ಪ್ರಧಾನ ವ್ಯವಸ್ಥಾಪಕರಾದ ಶ್ರೀ ಎನ್.ಕೆ. ನಂದಾರವರು ಮುಖ್ಯ

ಅತಿಥಿಗಳಾಗಿ ಆಗಮಿಸಿ ಶುಭ ಹಾರೈಸಿದರು. ಸಮಾರಂಭದಲ್ಲಿ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಉತ್ಸವದ ನಂತರ ಎಲ್ಲಾ ಮಕ್ಕಳಿಗೂ, ಹಂಪೆ, ತುಂಗಭದ್ರಾ ಡ್ಯಾಂ, ಪಂಪಾವನ ಇತ್ಯಾದಿ ಸ್ಥಳಗಳನ್ನು ತೋರಿಸಲಾಯಿತು.

ಶ್ರೀ ಎಲ್.ಟಿ. ಲೋಕೇಶ್ ಹಾಗೂ ಶ್ರೀಮತಿ ಜಯಶ್ರೀ ಉತ್ಸವದ ನಾಯಕರುಗಳಾಗಿ ಕಾರ್ಯನಿರ್ವಹಿಸಿದರು. ಶ್ರೀಮತಿ ಹೇಮಾ ವಿಜಯಕುಮಾರ್, ಶ್ರೀಮತಿಯರಾದ ಜೂಲಿಯಾನ ಲಸರಾಡೋ, ಸಂಧ್ಯಾರಾಣಿ ರಾಮರಾವ್, ಶ್ರೀ ಟಿ.ಎ. ಮಂಜುನಾಥಚಾರ್, ಶ್ರೀಮತಿ ಸುಶೀಲಾ ಗೋಪಾಲ್, ಶ್ರೀಮತಿ ರವಿ ವೆಸ್ಲಿ, ಶ್ರೀಮತಿ ಎಸ್.ಕೆ. ಪ್ರಭಾ, ಮಿಸ್ ಪಿ. ಸರೋಜ, ಶ್ರೀಮತಿ ಬಿ. ರೇವತಿ, ಶ್ರೀಮತಿ ಮಂಜುಳ, ಜಿಲ್ಲೆಯ ಸ್ಕೌಟರ್ಸ್, ಗೈಡರ್ಸ್‌ಗಳು ಸಹಾಯಕರಾಗಿದ್ದರು. ಹಾಗೂ ಶ್ರೀ ನಾರಾಯಣ ಶೆಟ್ಟಿ ಮತ್ತು ಶ್ರೀಮತಿ ಜಾನಕಿ ವೇಣುಗೋಪಾಲ್ ಉತ್ಸವದ ಮೇಲ್ವಿಚಾರಕ-ರಾಗಿದ್ದರು. ಶ್ರೀಮತಿ ಗೀತಾ ನಟರಾಜ್, ಜಂಟಿ ರಾಜ್ಯ ಕಾರ್ಯದರ್ಶಿಯವರು ಉಪಸ್ಥಿತರಿದ್ದು ಎಲ್ಲರನ್ನು ವಂದಿಸಿದರು. 500 ಕಬ್ಸ್ - ಬುಲ್‌ಬುಲ್ಸ್‌ಗಳು ಹಾಗೂ 50 ಜನ ಸಿಬ್ಬಂದಿ ವರ್ಗದವರು ಭಾಗವಹಿಸಿದರು. ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಓಮೇಶ್ವರಯ್ಯ ಹಾಗೂ ರಾಜ್ಯ ಪರಿಷತ್ ಸದಸ್ಯೆ ಶ್ರೀಮತಿ ರೇಣುಕಾ ಉತ್ಸವದ ಯಶಸ್ಸಿಗೆ ಬಹಳಷ್ಟು ಶ್ರಮಿಸಿದರು.

## Regional Level Testing Camp held for Rastrapathi Scouts at Dr. Annie Besant Park, Doddaballapur

*The Regional level Testing Camp for Rastrapathi Scouts was held at Dr. Annie Besant Park, Doddaballapur, from 20-9-2007 to 24-9-2007 and 25-9-2007 to 29-9-2007 (Two Camps.)*

*228 Scouts attended the Testing Camp from 20 Districts. Sri M.S. Quareshi. Assistant Director, Southern Region was the Leader of the Camp, assisted by our ASOC's and DOC's and eight Trainers from Kerala and Chennai worked as Examinars. Sri Narayana Setty, SOC(S) was Co-ordinator of the Camp.*



ಧಾರವಾಡದಲ್ಲಿ ನಡೆದ ಗಾಂಧೀ ಜಯಂತಿ, ಕಾರ್ಯಕ್ರಮದಲ್ಲಿ ಶ್ರೀಮತಿ ಅಡಗಲ್, ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು ಭಾಗವಹಿಸಿದ್ದರು. ಶ್ರೀ ಎಂ.ಎಂ. ಲೋಂಡೆ ಜಿಲ್ಲಾ ಮುಖ್ಯ ಆಯುಕ್ತರು ಮಾತನಾಡುತ್ತಿರುವುದು. ಶ್ರೀಮತಿ ಪ್ರೇಮ ಮಂಗಳೂರು, ಶ್ರೀಮತಿ ಪ್ರಭಾಲೊಂಡೆ ಇವರನ್ನು ಕಾಣಬಹುದು.

ಹಾಸನದಲ್ಲಿ ನಡೆದ ಕಬ್ಸ್ ಮತ್ತು ಬುಲ್ ಬುಲ್ಸ್‌ಗಳ ಸಿಕ್ಸರ್ ಶಿಬಿರದಲ್ಲಿ ಡಾ|| ವೈ.ಎಸ್. ವೀರಭದ್ರಪ್ಪ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಮಾತನಾಡುತ್ತಿರುವರು. ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀ ಸದಾಶಿವಶೆಟ್ಟಿ, ಜಿಲ್ಲಾ ಕಾರ್ಯದರ್ಶಿ, ಶ್ರೀ ಪ್ರಕಾಶ್, ಎ.ಎಸ್.ಓ.ಸಿ. ಶ್ರೀ ಎಲ್.ಟಿ. ಲೋಕೇಶ್ ಹಾಗೂ ಗೈಡ್ ಶಿಕ್ಷಕಿಯರನ್ನು ಕಾಣಬಹುದು.







ಗಾಂಧಿ ಜಯಂತಿ ಅಂಗವಾಗಿ ಚಿಕ್ಕಮಗಳೂರಿನ ಜಿಲ್ಲಾ ಭವನದಲ್ಲಿ ಸರ್ವಧರ್ಮ ಪ್ರಾರ್ಥನೆ ನಡೆಯಿತು. ಶ್ರೀ ಎಂ.ಎನ್. ಷಡಾಕ್ಷರಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀಮತಿ ಸಂಧ್ಯಾರಾಣಿ, ಲೀಡರ್‌ಟ್ರೈನರ್ (ಕಬ್ಸ್), ಸ್ಕೌಟರ್ಸ್ ಮತ್ತು ಗೈಡರ್ಸ್ ಹಾಗೂ ಸ್ಕೌಟ್ಸ್ – ಗೈಡ್ಸ್‌ಗಳು ಭಾಗವಹಿಸಿದ್ದರು.

ಮಂಡ್ಯಜಿಲ್ಲೆಯ ಶ್ರೀಲಕ್ಷ್ಮೀಜನಾರ್ಧನ ಬಾಲಕಿಯರ ಪ್ರೌಢಶಾಲೆಯ ಗೈಡ್ಸ್‌ಗಳು ನೇತ್ರ ತಪಾಸಣಾ ಶಿಬಿರದಲ್ಲಿ ಸೇವೆ ಸಲ್ಲಿಸುತ್ತಿರುವುದು.





ಶ್ರೀ ಅನೀಸ್‌ಸಿರಾಜ್,ಭಾ.ಆ.ಸೇ, ಜಿಲ್ಲಾಧಿಕಾರಿ, ರಾಯಚೂರ ಇವರು ಗಾಂಧೀ ಜಯಂತಿ ಕಾರ್ಯಕ್ರಮವನ್ನು ಉದ್ಘಾಟಿಸಿತ್ತಿರುವುದು. ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಆರ್. ನರಸಿಂಹಮೂರ್ತಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ಪದ್ಮನಾಭನ ಪೋಲೀಸ್ ವರಿಷ್ಠಾಧಿಕಾರಿ, ಶ್ರೀ ಸೂರ್ಯನಾರಾಯಣ, ತಹಸೀಲ್ದಾರ್, ಶ್ರೀಮತಿ ಇಂದಿರಾ, ಕ್ಷೇತ್ರಶಿಕ್ಷಣಾಧಿಕಾರಿ ಹಾಗೂ ಇತರರನ್ನು ಕಾಣಬಹುದು.



**ಶ್ರೀ ಪಿ.ಎಸ್. ವಸ್ತ್ರದ ಭಾ.ಆ.ಸೇ, ಜಿಲ್ಲಾಧಿಕಾರಿಗಳು ಮತ್ತು ಅಧ್ಯಕ್ಷರು ಜಿಲ್ಲಾ ಸಂಸ್ಥೆ, ಹಾವೇರಿ ಇವರು ಗುಂಪು ನಾಯಕರ ತರಬೇತಿ ಶಿಬಿರದ ಸಮಾರೋಪ ಸಮಾರಂಭದಲ್ಲಿ ಮಾತನಾಡುತ್ತಿರುವುದು. ಹಾಗೂ ಶ್ರೀ ಪ್ರಭಾಕರರಾವ್ ಮಂಗಳೂರ, ಶ್ರೀಮತಿ ಮಾಧುರಿದೇವಧರ, ಜಿಲ್ಲಾ ಆಯುಕ್ತರು(ಗೈಡ್ಸ್) ಇವರನ್ನು ಕಾಣಬಹುದು.**



ಗಾಂಧಿ ಜಯಂತಿ ಪ್ರಯುಕ್ತ, ಗುಲ್ಬರ್ಗಾದ ಸರ್ದಾರ್ ವಲ್ಲಭಭಾಯ್ ಪಟೇಲ್ ಪ್ರೌಢಶಾಲೆಯಲ್ಲಿ ನಡೆದ ಸರ್ವಧರ್ಮ ಪ್ರಾರ್ಥನೆ ಸಮಾರಂಭದಲ್ಲಿ ಶ್ರೀಮತಿ ಪದ್ಮಪ್ರಿಯ, ಮಾಜಿ ಜಿಲ್ಲಾ ಗೈಡ್ ಆಯುಕ್ತರು, ಮತ್ತು ಶಾಲಾ ಸಿಬ್ಬಂದಿ ಹಾಗೂ ಸ್ಕೌಟ್ಸ್ ಗೈಡ್ಸ್‌ಗಳು ಭಾಗವಹಿಸಿದ್ದರು.

ಬೆಳಗಾಂ ಜಿಲ್ಲೆ ರಾಮದುರ್ಗ ತಾಲ್ಲೂಕಿನ ಶ್ರೀ ಫಲಹಾರ ಶಿವಯೋಗೀಶ್ವರ ಪ್ರೌಢ ಶಾಲೆ, ಸುರೇಬಾನ, ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ದೀಕ್ಷ ಸಮಾರಂಭ ಏರ್ಪಡಿಸಿದ್ದರು. ಕ್ಷೇತ್ರ ದೈಹಿಕ ಶೀಕ್ಷಣಾಧಿಕಾರಿಗಳಾದ ಶ್ರೀ ಆರ್.ಎಸ್. ವಾಸನದ, ಕಾರ್ಯದರ್ಶಿ ಶ್ರೀ ಡಿ.ಬಿ. ಅತ್ತಾರ ಹಾಗೂ ಇತರೆ ಪದಾಧಿಕಾರಿಗಳು, ಶಾಲೆಯ ಶಿಕ್ಷಕರು ಮತ್ತು ಸಿಬ್ಬಂದಿವರ್ಗವನ್ನುಕಾಣಬಹುದು.









# 50th Year of Jamboree on the AIR

*The Jamboree on the Air and Jamboree on the Internet was held at State Headquarters S. Kondajji Basappa Road, Bangalore on 19th to 21st October 2007. 200 Scouts / Guides / Cubs and Bulbuls attended the programme.*

*Lion Ajay, Secretary, Ameture Radio Club, Malleswaram Bangalore and his team, Organised this event at SHQ premises Sri N. Sreenivasan, Smt. Geetha Nataraj, Jt. State Secretaries, Sri M.A. Chellaiah, Headeraquarter Commissioners and Sri Narayana Setty, SOC(S) were present. Sri A.M. Shankar ASOC(S) Co-ordinated the programme.*

## ದಯವಿಟ್ಟು ಗಮನಿಸಿ

**2007-2008ನೇ ಸಾಲಿನಲ್ಲಿ ಜಿಲ್ಲೆಗಳಿಗೆ ನಿಗದಿಪಡಿಸಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಗಣತಿಯನ್ನು ಜಾಗ್ರತೆ ಪೂರ್ಣಗೊಳಿಸಲು ಹಾಗೂ ಸಂಗ್ರಹಿಸಿರುವ ದಳಗಳ ನವೀಕರಣ ಶುಲ್ಕವನ್ನು ರಾಜ್ಯ ಕಾರ್ಯಾಲಯಕ್ಕೆ ತಕ್ಷಣ ಪಾವತಿಸಲು ಕೋರಲಾಗಿದೆ.**

**ಸಹಿ/- ರಾಜ್ಯ ಕಾರ್ಯದರ್ಶಿ**

## COMMING EVENTS

***Preparatory Camp for Rajyapuraskar Scouts & Guides will be held at Kondajji Basappa Scouts & Guides Training Centre, Kondajji from 12th to 16th November 2007. Please depute Candidates as per quota alloted to your District Association.***

***Sd/- State Secretary***




# ವಚನ ಮೌಲ್ಯ

ಗೊ.ರು. ಚನ್ನಬಸಪ್ಪ

ಹಾಗೆಂದು ಇಡೀ ವಚನ ಸಾಹಿತ್ಯ ಭಂಡಾರವನ್ನೆಲ್ಲಾ ಹುಡುಕಿದರೂ ಮೌಲ್ಯ ಎನ್ನುವ ಶಬ್ದ ಸಿಕ್ಕುವುದಿಲ್ಲ. ಆದರೆ ಆ ಸಾಹಿತ್ಯದಲ್ಲಿರುವುದು ಮೌಲ್ಯವಲ್ಲದೆ ಬೇರೆ ಅಲ್ಲ. 'ಮೌಲ್ಯ' ಎನ್ನುವುದು ನಮ್ಮ ವಚನಕಾರರ ದೃಷ್ಟಿಯಲ್ಲಿ ನಿಘಂಟಿನ ಶಬ್ದವಲ್ಲ. ಅದು ಅವರ ನಡೆ-ನುಡಿಯ ಕ್ರಿಯಾ ಸೂತ್ರ. ಅವರ ಬದುಕಿನಲ್ಲಿ ಮೌಲ್ಯ ಎನ್ನುವುದು ಬೇರಾಗಿ ಸಾರ ಒದಗಿಸುತ್ತದೆ. ಅವರಲ್ಲಿ ಮೌಲ್ಯವೆಂದರೆ ನಡೆ-ನುಡಿಯ ಹೊಂದಾಣಿಕೆ; ಹೃದಯ-ಮನಸ್ಸುಗಳ ಸಮನ್ವಯ. ವ್ಯಕ್ತಿ-ವ್ಯಕ್ತಿಯ ಮಧ್ಯೆ ಆತ್ಮೀಯತೆ ಬೆಳೆಸುವ, ಸೌಹಾರ್ದ ಸಂಬಂಧ ಸಂಘಟಿಸುವ ಸಾತ್ವಿಕ ರೀತಿ-ನೀತಿಯೇ ಮೌಲ್ಯ.

ಒಳ್ಳೆಯ ನುಡಿ, ಒಳ್ಳೆಯ ನಡೆ - ಇದೇ ಮೌಲ್ಯ. ಇದನ್ನೇ ನಾವು ಸಂಸ್ಕೃತಿ ಎನ್ನುವುದು. ಸಭ್ಯತೆ, ಸಾತ್ವಿಕತೆ, ಪ್ರಾಮಾಣಿಕತೆ, ಸ್ವಂತಿಕೆ, ವಿಚಾರ ಶೀಲತೆ, ಮನೋವೈಶಾಲ್ಯತೆ - ಇವೆಲ್ಲ ಮೌಲ್ಯದ ಸೂತ್ರ ರೂಪಗಳು. ವಚನಕಾರರು ಅನುಕರಣೆಯಿಂದ ಮೌಲ್ಯಗಳಿಗೆ ಅರ್ಥ ತಂದುಕೊಟ್ಟವರಲ್ಲ; ಅನುಭವದ ಮೇಲೆ ಬದುಕನ್ನು ತಿದ್ದಿಕೊಂಡು ಮೌಲ್ಯಗಳನ್ನು ನೆಲೆಗೊಳಿಸಿದವರು. ಮೌಲ್ಯ ಹೊರಗಣ್ಣಿನ ಹೊಳಪಲ್ಲ; ಒಳಗಣ್ಣಿನ ಬೆಳಕು!

ಮೌಲ್ಯಾಧಾರಿತ ವ್ಯಕ್ತಿಗಳಿಂದ ಸಮುದಾಯ ಸಂಬಂಧ ತುಂಬ ಹಿತವಾಗಿರುತ್ತದೆ. ಅಂತಹ ವ್ಯಕ್ತಿಗಳ ಬದುಕಿನಲ್ಲಿ ದ್ವೇಷ-ಅಸೂಯೆಗಳಿಗೆ, ಭಯ-ಭೀತಿಗಳಿಗೆ, ಅನುಮಾನ-ಅಪನಂಬಿಕೆಗಳಿಗೆ ಅವಕಾಶವಿರುವುದಿಲ್ಲ. ಏಕೆಂದರೆ ಅವರ ಬದುಕಿಗೆ ಪ್ರೀತಿಯೊಂದೇ ಜೀವದ್ರವ್ಯ.

ವಚನಗಳಲ್ಲಿ ಸಮೃದ್ಧವಾಗಿ ಕಾಣಸಿಗುವ ದೈವೀ ಶ್ರದ್ಧೆ, ಜೀವನ ಪ್ರೀತಿ, ಸಂಸಾರ ಸಹಜತೆ, ಶ್ರಮದ ದುಡಿಮೆ, ಗುಣ- ದೋಷ ವಿಮರ್ಶೆ, ಆತ್ಮ ನಿರೀಕ್ಷೆ, ಗುರುಲಿಂಗ-ಜಂಗಮ ಗೌರವ, ನಿಸರ್ಗ ನಂಬಿಕೆ, ಜೀವ ಕಾರುಣ್ಯ, ಸರ್ವ ಸಮದೃಷ್ಟಿ, ಉಪಕಾರ ಸ್ಮರಣೆ, ಅಹಂನಿರಸನ, ಕಾಯಕ ನಿಷ್ಠೆ, ದಾಸೋಹ ದೃಷ್ಟಿ - ಹೀಗೆ ಮತ್ತು ಇಂತಹ ಗುಣಸ್ವಭಾವಗಳೆಲ್ಲ ಮೌಲ್ಯಗಳಾಗಿ ಉಸಿರಾಡುತ್ತವೆ. ವಚನಕಾರರಿಗೆ ಈ ಮೌಲ್ಯಗಳೇ ಮೂಲಭೂತ ಸಂವಿಧಾನ ಸೂತ್ರಗಳು. ಅವುಗಳನ್ನು ಯಾವುದೇ ಕಾರಣಕ್ಕೆ ಬದಲಾಯಿಸಲಾಗದು. ಏಕೆಂದರೆ, ಮೌಲ್ಯಗಳು ತೊಟ್ಟು ಬಿಡುವ ಬಟ್ಟೆಯಂತಲ್ಲ; ಬಿಟ್ಟು ಬಿಡುವ ಗಂಡ-ಹೆಂಡತಿ ಸಂಬಂಧವಲ್ಲ; ಬದಲಾಯಿಸಲಾಗದಂತಹ ಹೆತ್ತ ತಾಯಿಯಿದ್ದಂತೆ!

ವಚನ ಸಾಹಿತ್ಯ ಶರಣರ ಅನುಭಾವದ ಆಳದಿಂದ ಸಹಜವಾಗಿ ಮೂಡಿ ಬಂದ ಅಭಿವ್ಯಕ್ತಿ-ನೆಲದಿಂದ ಚಿಮ್ಮುವ ನೀರಿನ ಬುಗ್ಗೆಯಂತೆ. ವಚನಗಳು ಬೋಧನೆಯಲ್ಲ; ಆಚರಣೆ. ಅವುಗಳನ್ನು ಓದಿ - ಕೇಳಿ ಅನುಭವಿಸುವುದಲ್ಲ; ಆಚರಿಸಿ ಅನುಭವಿಸುವಂತಹವು. ವನಚಗಳು ಎಷ್ಟು ಸರಳವೋ, ಅಷ್ಟು ಅರ್ಥಗರ್ಭಿತ. ಎಷ್ಟು ನೇರವೋ, ಅಷ್ಟೇ ನಿಗೂಢ. ಆ ನುಡಿಗಳ ಹಿಂದೆ ಭಾವವಿದೆ; ಬೆವರಿದೆ. ಈ ಭಾವ-ಬೆವರುಗಳ ಮಧುರ ಸಂಗಮವೇ ವಚನಕಾರರ ಬದುಕು. ಹಾಗಾಗಿ ಅವರ ಬದುಕಿನ ತೋಟದಲ್ಲಿ ನಮಗೆ ಮೌಲ್ಯಗಳ ಮಧುರ ಫಲವಲ್ಲದೆ ಮತ್ತೇನು ದೊರಕಲು ಸಾಧ್ಯ?

ವಚನ ಸಾಹಿತ್ಯ ಒಂದು ಕಾಲಮಾನದ ಸಾಮಾಜಿಕ ಮತ್ತು ಧಾರ್ಮಿಕ ಜಡ ವ್ಯವಸ್ಥೆಯ ವಿರುದ್ಧ ಸಿಡಿದೆದ್ದು ನಿಂತ ಒಂದು ಆಂದೋಲನದ ಫಲ. ಅದು ಆ ಆಂದೋಲನದ ಭಾಗಸ್ಥರಾದ ಶರಣರ ಅನುಭಾವ ಗೋಷ್ಠಿಗಳಲ್ಲಿ ಕಡೆದು ಪಡೆದ ನವನೀತ. ಕತ್ತಲೆಯ ಪರಿಸರಕ್ಕೆ ಹಿಡಿದ ಬೆಳಕು. ಜ್ಞಾನ-ಕ್ರಿಯೆಗಳ ಸಮನ್ವಯ ಸೂತ್ರದ ದರ್ಶನ.

ನಾನು ಮೊದಲೇ ಹೇಳಿದಂತೆ ವಚನಗಳಲ್ಲಿ ಮೌಲ್ಯವನ್ನು ಹುಡುಕಬೇಕಾಗಿಲ್ಲ. ಅವೇ ಮೌಲ್ಯಗಳ ಪ್ರತೀಕ. ವಚನಗಳಲ್ಲಿ ಕೆಲವು ಸಾಂದರ್ಭಿಕವಿರಬಹುದು. ಆದರೆ ಬಹುತೇಕ ವಚನಗಳು ಸಾರ್ವಕಾಲಿಕ ಮೌಲ್ಯಗಳೆಂದರೆ ಕಾರ್ಖಾನೆಯಲ್ಲಿ ತಯಾರಿಸಲ್ಪಡುವ ಸಾಮಗ್ರಿಗಳಲ್ಲ; ಅಥವಾ 'ಬುದ್ಧಿ ಜೀವಿ'ಗಳು ಕುಳಿತು ರಚಿಸುವ ನಿಯಮಾವಳಿಗಳಲ್ಲ. ಅವು ಸಾತ್ವಿಕ ವ್ಯಕ್ತಿಯ ಅನುಭಾನದ ಅಂಗಳದಲ್ಲಿ ಅರಳಿದ ಹೂವುಗಳು.

ಈ ವಚನಗಳ ಮೌಲ್ಯವನ್ನು ವಚನಕಾರನೇ ಆದ ಸಮ್ಯಜ್ಞಾನಿ ಚನ್ನಬಸವಣ್ಣನ ಒಂದು ವಚನದಲ್ಲೇ ಕಾಣಬಹುದು :

**ಪಾತಾಳದಗ್ಗಣಿಯ ನೇಣಿಲ್ಲದೆ ತೆಗೆಯಬಹುದೆ,**
**ಸೋಪಾನದ ಬಲದಿಂದಲ್ಲದೆ?**
**ಶಬ್ದ ಸೋಪಾನವ ಕಟ್ಟಿ ನಡೆಯಿಸಿದರು ಪುರಾತರು**
**ದೇವಲೋಕಕ್ಕೆ ಬಟ್ಟೆ ಕಾಣಿರೋ!**
**ಮರ್ತ್ಯದ ಮನದ ಮೈಲಿಗೆಯ ಕಳೆಯಲೆಂದು**
**ಗೀತ-ಮಾತೆಂಬ ಜ್ಯೋತಿಯ ಬೆಳಗಿ ಕೊಟ್ಟರು**
**ಕೂಡಲ ಚೆನ್ನಸಂಗನ ಶರಣರು!**

ಇಲ್ಲಿ 'ಮರ್ತ್ಯದ ಮನದ ಮೈಲಿಗೆಯ ಕಳೆಯಲೆಂದು' ಎನ್ನುವ ಮಾತು ಅತ್ಯಂತ ಮುಖ್ಯವಾದುದು. ಮೌಲ್ಯಗಳು ಇರಬೇಕಾದುದೇ ಈ ಉದ್ದೇಶಕ್ಕಾಗಿ. ಆದ್ದರಿಂದ ಮೌಲ್ಯಗಳನ್ನು ನಾವು ಮಾತಿನಲ್ಲಿ ಉಳಿಸಿಕೊಳ್ಳದೆ ಕೃತಿಯಲ್ಲಿ ಉಳಿಸಿಕೊಳ್ಳಬೇಕು. ಇಲ್ಲಿ ವಚನ ಮೌಲ್ಯವೆಂದರೆ ಜೀವನ ಮೌಲ್ಯವೇ!

+



# ಜಿಲ್ಲಾ ವಾರ್ತೆ

## ಮಂಡ್ಯ ಜಿಲ್ಲೆ

22ನೇ ರಾಷ್ಟ್ರೀಯ ನೇತ್ರದಾನ ಪಾಕ್ಷಿಕ ದಿನಾಚರಣೆ ಅಂಗವಾಗಿ ಜಿಲ್ಲಾ ಅಂಧತ್ವ ನಿಯಂತ್ರಣಾ ಸಂಘ ಮಂಡ್ಯದವರು ಏರ್ಪಡಿಸಿದ ಜಾಥದಲ್ಲಿ ಹಾಗೂ ಕಾರ್ಯಕ್ರಮದಲ್ಲಿ ಹೆಚ್ಚಿನ ಸಂಖ್ಯೆಯ ಸ್ಕೌಟ್ಸ್-ಗೈಡ್ಸ್, ಸ್ಕೌಟರ್ ಮತ್ತು ಗೈಡರ್‌ಗಳು ಭಾಗವಹಿಸಿದ್ದರು.

ದಿನಾಂಕ : 8-9-2007 ರಂದು ಸಾಕ್ಷರತಾ ಅಂದೋಳನದ ಅಂಗವಾಗಿ ಏರ್ಪಡಿಸಿದ ಜಾಥಾ ಕಾರ್ಯಕ್ರಮದಲ್ಲಿ ಸ್ಕೌಟ್ಸ್, ಗೈಡ್ಸ್‌ಗಳು ಭಾಗವಹಿಸಿದ್ದರು.

ದಿನಾಂಕ 26-9-2007 ರಂದು ಶ್ರೀರಂಗಪಟ್ಟಣದ ಲೆನಿನ್ ಕಾನ್ವೆಂಟ್ ಶಾಲೆಯಲ್ಲಿ ಶ್ರೀರಂಗಪಟ್ಟಣ ತಾಲ್ಲೂಕು ಸ್ಕೌಟರ್-ಗೈಡರ್‌ಗಳ ಸಭೆಯು ಕ್ಷೇತ್ರ ಶಿಕ್ಷಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. ಇದರಲ್ಲಿ ತಾಲ್ಲೂಕಿನ ಎಲ್ಲಾ ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು.

ದಿನಾಂಕ 2-10-2007 ರಂದು ಜಿಲ್ಲಾ ಸಂಸ್ಥೆಯ ಆವರಣದಲ್ಲಿ ಗಾಂಧಿ ಜಯಂತಿ ಅಂಗವಾಗಿ ಕಾರ್ಯಕ್ರಮವನ್ನು ಏರ್ಪಡಿಸಿತ್ತು. ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸ್ಕೌಟ್ ಭವನದಿಂದ ಮೆರವಣಿಗೆ ಹೊರಟು. ನಗರದ ಗಾಂಧಿನಗರ, ಸಾರ್ವಜನಿಕ ಆಸ್ಪತ್ರೆ ಹಿಂಭಾಗದಲ್ಲಿರುವ ಕೊಳಚೆ ಪ್ರದೇಶಗಳಲ್ಲಿ ಸ್ವಚ್ಛತೆಯನ್ನು ಮಾಡಿ ಅಲ್ಲಿನ ನಿವಾಸಿಗಳಿಗೆ ಆರೋಗ್ಯದ ನಿಯಮಗಳ ಬಗ್ಗೆ, ಸಾಂಕ್ರಮಿಕ ರೋಗಗಳು ಹರಡುವ ಬಗ್ಗೆ ಹಾಗೂ ಆ ಸಾಂಕ್ರಾಮಿಕ ರೋಗಗಳು ಬಾರದಂತೆ ತೆಗೆದುಕೊಳ್ಳಬೇಕಾದ ಮುಂಜಾಗ್ರತೆಯ ಬಗ್ಗೆ ತಿಳುವಳಿಕೆ ನೀಡಿದರು.

ಅದೇ ದಿನ ಅಂದರೆ ದಿನಾಂಕ 2-10-2007 ರಂದು ಮಂಡ್ಯ ನಗರದ ಲಕ್ಷ್ಮೀ ಜನಾರ್ಧನ ಬಾಲಕಿಯರ ಪ್ರೌಢಶಾಲೆಯಲ್ಲಿ ಲಯನ್ಸ್, ರೋಟರಿ ಹಾಗೂ ರೆಡ್‌ಕ್ರಾಸ್ ಸಂಸ್ಥೆಯ ಆಶ್ರಯದಲ್ಲಿ ಏರ್ಪಡಿಸಿದ್ದ ಉಚಿತ ಕಣ್ಣು ತಪಾಸಣಾ ಶಿಬಿರದಲ್ಲಿ ಗೈಡ್ಸ್‌ಗಳು ಉತ್ತಮ ಸೇವೆ ಸಲ್ಲಿಸಿದರು.

## ಹಾಸನ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಜಿಲ್ಲಾ ಸಂಸ್ಥೆಯು ವತಿಯಿಂದ ಜಿಲ್ಲಾ ಮಟ್ಟದ ಕಬ್ಸ್ - ಬುಲ್‌ಬುಲ್ಸ್‌ಗಳ ಸಿಕ್ಸರ್ಸ್ ತರಬೇತಿ ಶಿಬಿರವನ್ನು ದಿನಾಂಕ : 6-10-2007 ರಂದು ಹಾಗೂ 7-10-2007 ರಂದು ಎರಡು ದಿನಗಳ ಕಾಲ ಹಾಸನ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನದಲ್ಲಿ ಏರ್ಪಡಿಸಲಾಗಿತ್ತು.

ಈ ತರಬೇತಿಗೆ ಹಾಸನ ಜಿಲ್ಲಾದ್ಯಂತ 6 ರಿಂದ 10 ವರ್ಷ ವಯೋಮಿತಿಯ ಕಬ್ಸ್ ಹಾಗೂ ಬುಲ್‌ಬುಲ್ಸ್ ಮಕ್ಕಳು ಒಟ್ಟು 120 ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಶಿಬಿರದ ನಾಯಕಿಯರಾಗಿ ಶ್ರೀಮತಿ ಉಮಾ, ಫ್ಲಾಕ್ ಲೀಡರ್ ಹಾಗೂ ಶ್ರೀಮತಿ ಜೋಸ್ಪಿನ್, ಕಬ್ ಮಾಸ್ಟರ್, ಇವರು ಆಗಮಿಸಿ ತರಬೇತಿ ನೀಡಿದರು.

ಶಿಬಿರದ ಉದ್ಘಾಟನೆಯು ದಿನಾಂಕ 6-10-2007 ರಂದು ಬೆಳಿಗ್ಗೆ 11 ಗಂಟೆಗೆ ಶ್ರೀ ಎಂ.ಎಸ್. ಪ್ರಕಾಶ್, ಜಿಲ್ಲಾ ಕಾರ್ಯದರ್ಶಿ ಇವರಿಂದ ಶುಭ ಹಾರೈಕೆ ಮಾಡುವುದರ ಮೂಲಕ ನೆರವೇರಿತು. ಶಿಬಿರದ ಮುಕ್ತಾಯ ಸಮಾರಂಭವು ದಿನಾಂಕ : 7-10-2007 ರಂದು ಮಧ್ಯಾನ್ಹ 3-30ಕ್ಕೆ ಹಾಸನ ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಡಾ|| ವೈ.ಎಸ್. ವೀರಭದ್ರಪ್ಪರವರ ಅಧ್ಯಕ್ಷತೆಯಲ್ಲಿ ಜರುಗಿತು. ಮುಖ್ಯ ಅತಿಥಿಯಾಗಿ ಸಂಸ್ಥೆಯ ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀ ಹೆಚ್.ಬಿ. ಸದಾಶಿವಶೆಟ್ಟಿರವರು ಭಾಗವಹಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಎಸ್.

ಪ್ರಕಾಶ್ ಸ್ವಾಗತಿಸಿ ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ಸಹಾಯಕ ಸಂಘಟಕರು ಕಾರ್ಯಕ್ರಮ ನಿರೂಪಿಸಿ, ಶ್ರೀ ಎನ್.ಆರ್. ಚಂದ್ರಾಚಾರ್ ವಂದನೆ ಸಲ್ಲಿಸಿದರು.

## ಬೀದರ್ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ ಬೀದರ್ ದಿನಾಂಕ 1-10-2007 ರಂದು ಪನ್ನಾಲಾಲ್ ಹೀರಾಲಾಲ್ ಪದವಿ ಪೂರ್ವ ಕಾಲೇಜ್ ಬೀದರ್‌ನಲ್ಲಿ "ವಿಶ್ವ ಹಿರಿಯರ ದಿನ"ವನ್ನು ಆಯೋಜಿಸಿತ್ತು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯಲ್ಲಿ ಸೇವೆಸಲ್ಲಿಸಿದ ಶ್ರೀ ಮೋದಿ ನಾಗಶೆಟ್ಟಿ, ಹೆಚ್.ಡಬ್ಲ್ಯೂ.ಬಿ.(ಸಿ), ಶ್ರೀ ಅಬ್ದುಲ್ ಹಫೀಜ್, ಹೆಚ್.ಡಬ್ಲ್ಯೂ.ಬಿ.(ಸಿ), ಶ್ರೀ ಶಂಕರವಾರ ಮೈನ್ನಳ್ಳಿ, ಎ.ಎಲ್.ಟಿ(ಎಸ್), ಶ್ರೀ ಸುಭಾಷ್ ರೆಡ್ಡಿ, ನಿವೃತ್ತ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳು, ಶ್ರೀ ಇಂದುಧರ ಉಪ್ಪಿನ, ಹೆಚ್.ಡಬ್ಲ್ಯೂ.ಬಿ.(ಎಸ್), ಹಾಗು ಶ್ರೀ ಸೂರ್ಯಕಾಂತ ರಾವ್ ಕುಲಕರ್ಣಿ, ನಿವೃತ್ತ ಪ್ರಾಚಾರ್ಯರು ಹಾಗೂ ಖಜಾಂಚಿ ಜಿಲ್ಲಾ ಸಂಸ್ಥೆ ಬೀದರ್ ಇವರನ್ನು ಸನ್ಮಾನಿಸಲಾಯಿತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಎಸ್.ಎಸ್. ಸಿದ್ಧಾರೆಡ್ಡಿ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು. ಅತಿಥಿಗಳಾಗಿ ಶ್ರೀ ಶೇಖ ಮುಸ್ತಾಕ ಅಲಿ, ಜಿಲ್ಲಾ ಕಾರ್ಯದರ್ಶಿಗಳು ಭಾಗವಹಿಸಿದ್ದರು. ಈ ಕಾರ್ಯಕ್ರಮಕ್ಕೆ 35 ಸ್ಕೌಟ್ಸ್, 20 ಗೈಡ್ಸ್, 15 ರೋವರ್ಸ್, 8 ರೇಂಜರ್ಸ್ ಹಾಗೂ ಪನ್ನಾಲಾಲ್ ಹೀರಾಲಾಲ್ ಶಾಲೆಯ 60 ಮಕ್ಕಳು ಭಾಗವಹಿಸಿದ್ದರು.

ದಿನಾಂಕ 1ನೇ ಸೆಪ್ಟೆಂಬರ್ 2007 ರಂದು ಜಿಲ್ಲಾ ಮಟ್ಟದ ಸ್ಕೌಟ್ಸ್ ಮಾಸ್ಟರ್, ಗೈಡ್ಸ್ ಕ್ಯಾಪ್ಟನ್, ಕಬ್ ಮಾಸ್ಟರ್, ರೇಂಜರ್ ಲೀಡರ್, ಫ್ಲಾಕ್ ಲೀಡರ್ ಸಮಾವೇಶ ಹಾಗೂ ಸ್ಕೌಟ್ಸ್ ಶತಮಾನೋತ್ಸವ ಪ್ರಯುಕ್ತ ಸ್ಕೌಟಿಂಗ್ ಪ್ರದರ್ಶನ ಏರ್ಪಡಿಸಲಾಗಿತ್ತು. ಶ್ರೀ ಬಂಡೆಪ್ಪಾ ಖಾಶೆಂಪೂರ ಮುಖ್ಯ ಅತಿಥಿಗಳಾಗಿ ಆಗಮಿಸಿ ಕಾರ್ಯಕ್ರಮ ಉದ್ಘಾಟಿಸಿದರು.

## ಧಾರವಾಡ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಆವರಣದಲ್ಲಿ ಮಹಾತ್ಮ ಗಾಂಧೀಜಿಯವರ ಜನ್ಮದಿನಾಚರಣೆ ಹಾಗೂ ವಿಶ್ವ ಅಹಿಂಸಾ ದಿನ ಆಚರಿಸಲಾಯಿತು. ಸ್ಕೌಟ್ಸ್-ಗೈಡ್ಸ್ ಮಕ್ಕಳು ಸದಸ್ಯರು ಮತ್ತು ಶಿಕ್ಷಕರು ಭಾಗವಹಿಸಿ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮಗಳನ್ನು ಪ್ರಾರಂಭಿಸಲಾಯಿತು. ಮಕ್ಕಳು ಗಾಂಧೀಜಿಯವರ ಬಗೆಗೆ ಮಾತನಾಡಿದರಲ್ಲದೆ, ಗಾಂಧೀಜಿಯವರ ಬಗ್ಗೆ ಹಾಡು, ಕವಿತೆಗಳನ್ನು ಹಾಡಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರಾದ ಶ್ರೀಮತಿ ಅಡಿಗಲ್‌ರವರು ಗಾಂಧೀಜಿಯವರ ಸಮಾಜ ಸೇವೆ, ಅವರ ಪ್ರಾರ್ಥನಾ ವಿಧಾನ ಹಾಗೂ ಎಲ್ಲರನ್ನು ಸಮಾನರಾಗಿ ಕಾಣಬೇಕೆಂಬ ತತ್ವದ ಬಗೆಗೆ ಹೇಳಿದರು. ಕು. ಪ್ರೇಮಾ ಮಂಗಳೂರ ಮಕ್ಕಳಿಗೆ ಗಾಯನಗಳನ್ನು ಹೇಳಿಕೊಟ್ಟರು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎಂ. ಲೋಂಡೆಯವರು ಯಾವ ಶಾಸ್ತ್ರಗಳ ಸಹಾಯವಿಲ್ಲದೆ, ಕೇವಲ ಶಾಂತಿಯುತ ಹೋರಾಟದಿಂದ ಭಾರತಕ್ಕೆ ಸ್ವಾತಂತ್ರವನ್ನು ತಂದುಕೊಟ್ಟ ಗಾಂಧೀಜಿಯವರ ವ್ಯಕ್ತಿತ್ವದ ಬಗೆಗೆ ವಿವರಿಸಿದರು. ಶ್ರೀ ಎಸ್.ಆರ್. ನೇಕಾರ್ ವಂದಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ಪ್ರಭಾಲೋಂಡೆಯವರು ಕಾರ್ಯಕ್ರಮ ಸಂಯೋಜನೆ ಮಾಡಿದರು. ಕಾರ್ಯಕ್ರಮದಲ್ಲಿ ಶ್ರೀ ಎ.ವಿ. ಸಿಂಧೆ, ಜಿಲ್ಲಾ ವಿಷಯ ಪರಿವೀಕ್ಷಕರಾದ ಶ್ರೀ ಬಿ.ವೈ. ಬಂಜೆಂತ್ರಿ, ನಿವೃತ್ತ ಜಿಲ್ಲಾ ದೈಹಿಕ ಅಧೀಕ್ಷಕರಾದ ಶ್ರೀ ಜೆ.ಡಿ. ಹಿರೇಮಠ ಹಾಗೂ ಶಿಕ್ಷಕರು ಉಪಸ್ಥಿತರಿದ್ದರು. ವೈಷವ ಜನತೊ ಮತ್ತು ರಾಮಧುನ್ ಪ್ರಾರ್ಥನೆಗಳೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

## ಚಿಕ್ಕಮಗಳೂರು ಜಿಲ್ಲೆ

ಸ್ಕೌಟ್ ಆಂದೋಳನದ ಅಂಗವಾಗಿ ಭಾರತ್ ಸ್ಕೌಟ್ ಮತ್ತು ಗೈಡ್ ಜಿಲ್ಲಾ ಸಂಸ್ಥೆಯ ವತಿಯಿಂದ ಸ್ಕೌಟ್ ಭವನದ ಫಿಲೋಮಿನಾ ಪೆರೇಸಿ ಸಭಾಂಗಣದಲ್ಲಿ ತಾ: 23-9-07 ರಂದು ಬೆಳಗ್ಗೆ 7 ಘಂಟೆಗೆ ಸರ್ವಧರ್ಮ ಪ್ರಾರ್ಥನೆ ಆಯೋಜಿಸಲಾಗಿತ್ತು. ನಗರದ ವಿವಿಧ ಶಾಲೆಗಳ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಪ್ರಾರ್ಥನೆಯಲ್ಲಿ ಪಾಲ್ಗೊಂಡಿದ್ದರು.

ಸಮಾರಂಭದಲ್ಲಿ ಮಾತನಾಡಿದ ಜಿಲ್ಲಾ ಆಯುಕ್ತ (ಸ್ಕೌಟ್) ಶ್ರೀ ಎಂ.ಎನ್. ಷಡಕ್ಷರಿ ವಿಶ್ವ ಭ್ರಾತೃತ್ವತ್ವವನ್ನು ಸಾರುವ ಸ್ಕೌಟ್ ಚಳುವಳಿಯ ಧ್ಯೇಯೋದ್ದೇಶಗಳು ನಮ್ಮ ನಿತ್ಯ ಜೀವನದ ಉಸಿರಾಗಬೇಕೆಂದರು.

ಶ್ರೀಮತಿ ಸಂಧ್ಯಾ ಗಾಣಿ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್)ಸರ್ವಧರ್ಮ ಪ್ರಾರ್ಥನೆಯ ನಾಯಕತ್ವ ವಹಿಸಿದ್ದರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಹಾಗೂ ನಗರದ ವಿವಿಧ ಶಾಲೆಗಳು, ದಳಗಳ ನಾಯಕರು ಉಪಸ್ಥಿತರಿದ್ದರು.

ನಂತರ ರಾಜ್ಯಪುರಸ್ಕಾರ ಸ್ಕೌಟ್ಸ್ ಮತ್ತು ಗೈಡ್ ಗಳಿಗೆ ಪರಿಕ್ಷಾ ಶಿಬಿರ ನಡೆಯಿತು. ಶ್ರೀಮತಿ ಛಾಯ, ಎಲ್.ಟಿ(ಆರ್) ಮತ್ತು ಶ್ರೀ ಆನಂದ ಅಡಿಗ, ಎಲ್.ಟಿ.(ಎಸ್) ರವರು ಪರಿಕ್ಷಾ ಶಿಬಿರದ ನೇತೃತ್ವ ವಹಿಸಿದ್ದರು.

## ರಾಯಚೂರು ಜಿಲ್ಲೆ

### ವಿಶ್ವಸ್ಕೌಟಿಂಗ್ ಶತಮಾನೋತ್ಸವದ ಅಂಗವಾಗಿ ಶ್ರಮದಾನ ಮತ್ತು ಗಾಂಧೀ ಜಯಂತಿ ಆಚರಣೆ

ಜಿಲ್ಲಾ ಸಂಸ್ಥೆ ರಾಯಚೂರ ಆಶ್ರಯದಲ್ಲಿ ವಿಶ್ವ ಸ್ಕೌಟ್ಸ್ ಶತಮಾನೋತ್ಸವದ ಅಂಗವಾಗಿ ಸರ್ಮಧರ್ಮಪ್ರಾರ್ಥನೆ ಮತ್ತು ಶ್ರಮಧಾನ ಶಿಬಿರ ಹಮ್ಮಿಕೊಳ್ಳಲಾಗಿತ್ತು. ಮಹಾತ್ಮಗಾಂಧಿ ಕ್ರೀಡಾಂಗಣದ ಬಳಿ ಇರುವ ಗಾಂಧೀಜಿಯವರ ಪ್ರತಿಮೆ ಪುತ್ಥಳಿಯ ಹತ್ತಿರ ಸರ್ವಧರ್ಮ ಪ್ರಾರ್ಥನೆ ನಡೆಸಲಾಯಿತು. ಶ್ರೀ ಅನೀಸಸಿರಾಜ ಜಿಲ್ಲಾಧಿಕಾರಿಗಳು ಕಾರ್ಯಕ್ರಮ ಉದ್ಘಾಟಿಸಿದರು. ಶ್ರೀ ಪದ್ಮನಯನ ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳು ತಹಸಿಲ್ದಾರ ಸೂರ್ಯನಾರಾಯಣ. ಶ್ರೀ ಕೆ. ತಿಮ್ಮಯ್ಯ ಡಿ.ಸಿ.ಸಿ. ಡಾ॥ ಆರ್. ನರಸಿಂಹ ಮೂರ್ತಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಇಂದಿರಾ ಕ್ಷೇತ್ರಶಿಕ್ಷಣಾಧಿಕಾರಿ, ಶ್ರೀಮತಿ ಅಜೀಜಾ ಸುಲ್ತಾನ, ಜಿಲ್ಲಾ ಆಯುಕ್ತೆ (ಗೈಡ್), ಶ್ರೀ ಖಾಜಾ ಹುಸೇನ್, ಜಿಲ್ಲಾ ಸಂಘಟನಾ ಆಯುಕ್ತರು (ಎಸ್), ಶ್ರೀಮತಿ ಭುವನೇಶ್ವರಿ ಹಾಗೂ ನಗರದ ಸ್ಕೌಟ್ಸ್‌ಗೈಡ್ ರೋವರ ಉಪಸ್ಥಿತರಿದ್ದುರು.

ನಂತರದಲ್ಲಿ ಕೆ ಆ್ಯಂಡ್ ಬಿ ಪ್ರೌಢಶಾಲೆಯ ಮುಂದಿರುವ ಸ್ಕೌಟ್‌ಭವನ ಸುತ್ತಮುಳ್ಳಿನ ಗಿಡಗಳನ್ನು ಕತ್ತರಿಸಿ ಸ್ವಚ್ಛಗೊಳಿಸಿದರು. ಶ್ರಮಧಾನ ಉದ್ಘಾಟನೆಯನ್ನು ಟಾಗೋರ ಪದವಿ ಕಾಲೇಜ್ ಪ್ರಾಚಾರ್ಯರು ಶ್ರೀ ಎಸ್.ಎ. ಮಾಲ ಪಾಟೀಲ ನಡೆಸಿ ಕೊಟ್ಟರು, ಶ್ರೀ ಚಂದ್ರ ಶೇಖರ ಬಂಡಾರಿ ಮು.ಗು. ಕೆ ಆ್ಯಂಡ್ ಬಿ ಪ್ರೌಢಶಾಲೆ, ಶ್ರೀ ಶ್ರೀನಿವಾಸ ರಾಯಚೂರಕರ ಎನ್.ಎಸ್.ಎಸ್. ಘಟಕಾಧಿಕಾರಿಗಳು ಎನ್.ಎಸ್.ಎಸ್. ವಿದ್ಯಾರ್ಥಿಗಳು ಸ್ಕೌಟ್ಸ್‌ಗೈಡ್ಸ್ ರೋವರ್ ಕಬ್ಸ್ - ಬುಲ್ ಬುಲ್ ಮಕ್ಕಳು ಭಾಗವಹಿಸಿದ್ದರು.

## ಬೆಳಗಾಂ ಜಿಲ್ಲೆ

ಸ್ಕೌಟ್ಸ್ ಭವನದಲ್ಲಿ 138ನೇಯ ಮಹಾತ್ಮ ಗಾಂಧಿ ಹಾಗೂ ಲಾಲ್‌ಬಹಾದ್ದೂರ ಶಾಸ್ತ್ರಿ ಇವರಿಬ್ಬರ ಜಯಂತಿಯನ್ನು ವಿಜೃಂಭಣೆಯಿಂದ ಆಚರಿಸಲಾಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ವಸಂತ ಕುಲಕರ್ಣಿ ಅವರ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮುವನ್ನು

ನಿರೂಪಿಸಲಾಗಿತ್ತು. ಸ್ಕೌಟ್ ಮತ್ತು ಗೈಡ್ಸ್ ಮಕ್ಕಳಿಗೆ "ಗಾಂಧೀಜಿ" ಭಾವಚಿತ್ರ ಬಿಡಿಸುವ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು.

ಸುತ್ತಮುತ್ತಲಿನ ಶಾಲೆಗಳ 100 ಮಕ್ಕಳ ಈ ಸಮಾರಂಭದಲ್ಲಿ ಭಾಗಿಯಾಗಿ ಉತ್ತಮ ಕಾರ್ಯಕ್ರಮನೀಡಿದರು. ಸ್ಕೌಟ್ ಭವನದ ಸುತ್ತ ಮುತ್ತಲ ಸ್ವಚ್ಛತೆಯನ್ನು ಮಾಡಲಾಯಿತು.

ಗಾಂಧೀಜಿಯವರಿಗೆ ಪ್ರಿಯವಾದ "ರಘುಪತಿ ರಾಘವ" ಹಾಡಿ ಗಾಂಧಿ ಜಯಂತಿಯನ್ನು ಅದ್ದೂರಿಯಾಗಿ ಆಚರಿಸಲಾಯಿತು.

## ಗುಲ್ಬರ್ಗಾ ಜಿಲ್ಲೆ

ರಾಮದುರ್ಗ ತಾಲ್ಲೂಕಿನ ಶ್ರೀ ಫಲಾಹಾರ ಶಿವಯೋಗಿಶ್ವರ ಹೈಸ್ಕೂಲ್ ಸುರೇಬಾನದಲ್ಲಿ ದಿನಾಂಕ 26-09-2007 ರಂದು "ದೀಕ್ಷಾ ವಿಧಿ ಸಮಾರಂಭ"ವನ್ನು ಏರ್ಪಡಿಸಲಾಯಿತು.

ಈ ಸಮಾರಂಭದಲ್ಲಿ ಮುಖ್ಯ ಅಧ್ಯಕ್ಷರಾಗಿ ಮಹಾವಿದ್ಯಾಲಯದ ಉಪ-ಪ್ರಾಚಾರ್ಯರಾದ ಶ್ರೀ ಎ.ಎಸ್. ಕುಮಠೆಯವರು ಹಾಗೂ ಮುಖ್ಯ ಅಥಿತಿಗಳಾಗಿ ತಾಲ್ಲೂಕಾ ಕ್ಷೇತ್ರದೈಹಿಕ ಶೀಕ್ಷಣಾಧಿಕಾರಿ-ಗಳಾದ ಶ್ರೀ ಆರ್.ಎಸ್. ವಾಸನದವರು ಸಂಸ್ಥೆಯ ನಿರ್ದೇಶಕರಾದ ಶ್ರೀ ಎಸ್.ಎಸ್. ಬೂದಿಹಾಳ. ತಾಲ್ಲೂಕಾ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಡಿ.ಬಿ. ಅತ್ತಾರವರು ಹಾಗೂ ಸ್ಕೌಟ್ ಪ್ರತಿನಿಧಿಯಾದ ಶ್ರೀ ಬಿ.ಸಿ ಬಿದರಿಯವರು ಉಪಸ್ಥಿತರಿದ್ದು ಸ್ಕೌಟ್‌ಗಳಿಗೆ ದೀಕ್ಷೆಯನ್ನು ನೀಡಿದರು. ಈ ಕಾರ್ಯಕ್ರಮವನ್ನು ಸ್ಕೌಟ್ ಶಿಕ್ಷಕರಾದ ಶ್ರೀ ವೈ.ವಿ ಗೊರವನಕೊಳ್ಳರವರು ನಿರ್ವಹಿಸಿದರು.

❀ ❀ ❀ ❀

ಅಕ್ಟೋಬರ್ 2 ರಂದು ಭಾರತದ ರಾಷ್ಟ್ರಪಿತ ಮಹಾತ್ಮ ಗಾಂಧಿಜೀಯವರ 138ನೇ ಜನ್ಮ ದಿನಾಚಾರಣೆಯನ್ನು ಶ್ರೀ ಸರದಾರ್ ವಲ್ಲಭ ಬಾಯಿ ಪಟೇಲ್ ಪ್ರೌಢ ಶಾಲೆ ಶಹಬಜಾರನಲ್ಲಿ ಆಚರಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷ ಸ್ಥಾನವನ್ನು ಶ್ರೀ ಗುರಯ್ಯ, ಅವರು ವಹಿಸಿ, ಕಾರ್ಯಕ್ರಮವನ್ನು ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಸರ್ವಧರ್ಮ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. 150 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದರು. ಆನಂತರ ಶಾಲೆಯ ಸುತ್ತಮುತ್ತಲು ಸ್ವಚ್ಛತಾ ಕಾರ್ಯಕ್ರಮವನ್ನು ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಬಹಳ ಉತ್ಸಾಹದಿಂದ ನೇರವೇರಿಸಿದರು.

ಮಾಜಿ ಗೈಡ್ ಕಮೀಷನರ್ ಶ್ರೀಮತಿ ಪದ್ಮಪ್ರಿಯ ಮತ್ತು ಸ್ಕೌಟರ್ ಶ್ರೀ ಎಂ. ಗೋಪಾಲರಾವ್ ಅವರು ಭಾಗವಹಿಸಿದರು.

## ತುಮಕೂರು ಜಿಲ್ಲೆ

**138ನೇ ಗಾಂಧೀಜಯಂತಿ ಮತ್ತು ಗಿಡ ನೆಡುವ ಕಾರ್ಯಕ್ರಮ :** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತುಮಕೂರು ಜಿಲ್ಲಾ ಸಂಸ್ಥೆ ಮತ್ತು ರೋಟರಿ ತುಮಕೂರು ಪೂರ್ವ ಇವುಗಳ ಸಂಯುಕ್ತಾಶ್ರಯದಲ್ಲಿ 138ನೇ ಗಾಂಧೀಜಯಂತಿ ಪ್ರಯುಕ್ತ ಸರ್ವಧರ್ಮ ಪ್ರಾರ್ಥನೆ ಮತ್ತು ಗಿಡನೆಡುವ ಕಾರ್ಯಕ್ರಮುವನ್ನು ದಿನಾಂಕ 2-10-2007ರಂದು ವರಿನ್ ಇಂಟರ್ ನ್ಯಾಷನಲ್ ಶಾಲೆ ಗೂಳೂರು ಇಲ್ಲಿ ಏರ್ಪಡಿಸಲಾಗಿತ್ತು. ಕಾರ್ಯಕ್ರಮವನ್ನು ಮಾನ್ಯ ಶ್ರೀ ಉಮಾಶಂಕರ್ ಜಿಲ್ಲಾಧಿಕಾರಿಗಳು ಮತ್ತು ಅಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ತುಮಕೂರು ಇವರು ಉದ್ಘಾಟಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಆಶಾಪ್ರಸನ್ನಕುಮಾರ್‌ರವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದು, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು, ಶ್ರೀ ಪರಮೇಶ್ವರ್‌ರವರು, ಭಾ.ಅ.ಸೇ. ಉಪ ಅರಣ್ಯ

ಸಂರಕ್ಷಣಾಧಿಕಾರಿಗಳು, ಶ್ರೀ ಖುರೇಷಿ, ಸಹಾಯ ನಿರ್ದೇಶಕರು, ದಕ್ಷಿಣ ಪ್ರಾಂತ್ಯ ಇವರುಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಸ್ಕೌಟ್ಸ್-ಗೈಡ್ಸ್ ತರಬೇತಿ ಶಿಬಿರವನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ತುಮಕೂರು ಜಿಲ್ಲಾ ಸಂಸ್ಥೆಯ ವತಿಯಿಂದ ದಿನಾಂಕ 11, 12, 13ನೇ ಅಕ್ಟೋಬರ್ 2007 ರಂದು ಎಂಪ್ರೆಸ್ ಬಾಲಕಿಯರ ಪದವಿ ಪೂರ್ವ ಕಾಲೇಜ್ ತುಮಕೂರು ಇಲ್ಲಿ ಏರ್ಪಡಿಸಲಾಗಿತ್ತು.

ಶಿಬಿರದಲ್ಲಿ ವಿವಿಧ ತಾಲ್ಲೋಕುಗಳಿಂದ 80 ಸ್ಕೌಟ್ಸ್ ಗೈಡ್ಸ್‌ಗಳು ಭಾಗವಹಿಸಿದ್ದ ಈ ಶಿಬಿರದಲ್ಲಿ ಶ್ರೀ ಕೆ.ಎಸ್. ಜಗದೀಶ್, ಸ್ಕೌಟ್ಸ್ ವಿಭಾಗದ ನಾಯಕರಾಗಿ ಶ್ರೀಮತಿ ಚೇತನಾ ಗೈಡ್ ವಿಭಾಗದ ನಾಯಕಿಯಾಗಿ ತರಬೇತಿಯನ್ನು ಯಶಸ್ವಿಯಾಗಿ ನಡೆಸಿದರು.

ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಕೆ.ಎಸ್. ಕಮಲ ಶಿಬಿರವನ್ನು ಉದ್ಘಾಟಿಸಿದರು. ಶ್ರೀಮತಿ ಆಶಾಪ್ರಸನ್ನಕುಮಾರ್‌ರವರು ಶಿಬಿರಾಗ್ನಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಬಿ.ಆರ್. ವೇಣುಗೋಪಾಲ ಕೃಷ್ಣರವರು ವಹಿಸಿದ್ದರು.

## ಹಾವೇರಿ ಜಿಲ್ಲೆ

ದಿನಾಂಕ : 17-10-2007 ರಿಂದ 19-10-2007ರ ವರೆಗೆ ಎಂ.ಪಿ.ಎಸ್. ನಂ.-2 ಜಿಲ್ಲಾ ಸಂಸ್ಥೆ ಹಾವೇರಿ ಆವರಣದಲ್ಲಿ ಗುಂಪುನಾಯಕರ ತರಬೇತಿ, ರಾಜ್ಯ ಪುರಸ್ಕಾರ ಪೂರ್ವ ಸಿದ್ಧತಾ ಮತ್ತು ಪದಕ ಸಿದ್ಧತಾ ಶಿಬಿರ ಹಾಗೂ ಪ್ರತಿಜ್ಞಾ ಪುನರಾವರ್ತನೆ ಸಮಾರಂಭ 3 ದಿನಗಳ ಕಾಲ ನಡೆಯಿತು.

ಶ್ರೀ ಕೆ.ಎಸ್. ಅರಳೀಕಟ್ಟಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಉಪಾಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್ ಹಾವೇರಿ ಇವರು ನೆರವೇರಿಸಿ ಸ್ಕೌಟಿಂಗ್‌ನ ತತ್ವ ಆದರ್ಶಗಳನ್ನು ತಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳಬೇಕು, ಶಿಸ್ತಿಗೆ ಹೆಸರಾದ ಸ್ಕೌಟ್ಸ್ ಸಂಸ್ಥೆಯು ಎಲ್ಲರಿಗೂ ಮಾರ್ಗದರ್ಶನವಾಗಬೇಕು ಎಂದು ತಿಳಿಸಿ ಇನ್ನೂ ಜಿಲ್ಲಾ ಸಂಸ್ಥೆಯ ಅಭಿವೃದ್ಧಿಗೆ ನಾನು ಕೂಡ ಶ್ರಮಿಸುತ್ತೇನೆಂದು ತಿಳಿಸಿದರು. ಇದೇ ಸಂದರ್ಭದಲ್ಲಿ ರಾಜ್ಯ ಸಂಸ್ಥೆಯವರು ಪ್ರಕಟಣೆ ಪ್ರಕಾರ ಬೆಳಗಾವಿ ವಿಭಾಗದಲ್ಲಿ ಉತ್ತಮ ಸ್ಕೌಟಿಂಗ್ ಸಂಘಟನೆಯಲ್ಲಿ ಪ್ರಥಮ ಸ್ಥಾನ ಬಂದಿದ್ದಕ್ಕಾಗಿ ಪಾರಿತೋಷಕವನ್ನು ಜಿಲ್ಲಾ ಮುಖ್ಯ ಆಯುಕ್ತರಿಗೆ ಹಸ್ತಾಂತರಿಸಿದರು.

ಲಂಡನ್ನಿನಲ್ಲಿ ನಡೆದ ವಿಶ್ವ ಸ್ಕೌಟ್ ಜಾಂಬೂರಿಯಲ್ಲಿ ಭಾಗವಹಿಸಿದ ಹಾವೇರಿ ಜಿಲ್ಲೆಯ ಉಪ ನಿರ್ದೇಶಕರು ಮತ್ತು ಜಿಲ್ಲಾ ಸ್ಕೌಟ್ ಕಮೀಷನರಾದ ಮಾನ್ಯ ಶ್ರೀ ಡಿ.ವಿ. ಬೆಲ್ಲದರವರನ್ನು ಇದೇ ಸಂದರ್ಭದಲ್ಲಿ ಸನ್ಮಾನಿಸಲಾಯಿತು. ಸನ್ಮಾನಿತರು ವಿಶ್ವ ಸ್ಕೌಟ್ ಜಾಂಬೂರಿಯ ಅನುಭವಗಳನ್ನು ಹಂಚಿಕೊಂಡರು.

ಮಾನ್ಯ ಶ್ರೀ ಪ್ರಭಾಕರರಾವ್ ಮಂಗಳೂರು ಜಿಲ್ಲಾ ಮುಖ್ಯ ಆಯುಕ್ತರು ಅವರು ಸ್ಕೌಟ್ಸ್ ಮತ್ತು ಗೈಡ್ಸ್ ಪ್ರತಿಯೊಂದು ಶಾಲೆಯಲ್ಲಿ ಪ್ರಾರಂಭವಾಗಬೇಕು ಮತ್ತು ಎಲ್ಲರೂ ರಾಜ್ಯ ಪುರಸ್ಕಾರ ಪಡೆಯಲಿಕ್ಕೆ ಶ್ರಮಿಸಬೇಕೆಂದು ತಿಳಿಸಿದರು.

ಮಾನ್ಯ ಶ್ರೀ ಎ.ಎಂ. ಅಕ್ಕಿ, ಡೈಯಟ ಪ್ರಾಚಾರ್ಯರು, ಹಾವೇರಿ. ಶ್ರೀಮತಿ ಮಾಧುರಿ ದೇವಧರ, ಜಿಲ್ಲಾ ಗೈಡ್ ಕಮೀಷನರ್, ಶ್ರೀಮತಿ ಹೆಚ್.ಎಂ. ಪ್ರೇಮಾ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಸಹಾಯಕ ಗೈಡ್ ಕಮೀಷನರ್ ಹಾಗೂ ಶ್ರೀ ಆರ್.ಆರ್. ಕಾಶಪ್ಪನವರ, ಜಿಲ್ಲಾ ಸ್ಥಾನಿಕ ಆಯುಕ್ತರು ಉಪಸ್ಥಿತರಿದ್ದರು.

ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಮಾನ್ಯ ಶ್ರೀ ಪಿ.ಎಸ್. ವಸ್ತ್ರದ, ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ,

ಹಾವೇರಿ, ಇವರು ವಹಿಸಿ ಮಕ್ಕಳನ್ನುದ್ದೇಶಿಸಿ ಸ್ಕೌಟ್ ಮತ್ತು ಗೈಡ್ ಸಂಸ್ಥೆಯು ಸಾಹಸ, ಸೇವೆ, ನಾಯಕತ್ವ ಬೆಳವಣಿಗೆ ಹಾಗೂ ಮಕ್ಕಳ ಸರ್ವಾಂಗೀಣ ಅಭಿವೃದ್ಧಿಯನ್ನು ಕಲಿಸಿ ಕೊಡುತ್ತದೆ ಎಂದು ನುಡಿದರು.

ಹಾವೇರಿ ಜಿಲ್ಲೆಯ ವಿವಿಧ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಂದ 100 ಸ್ಕೌಟ್ಸ್, 90 ಗೈಡ್ಸ್ ಮಕ್ಕಳು 18 ಸ್ಕೌಟ್ಸ್ ಮಾಸ್ಟರರು, 12 ಜನ ಗೈಡ್ ಕ್ಯಾಪ್ಟನ್ನರು ಭಾಗವಹಿಸಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು.

## ಉಡುಪಿ ಜಿಲ್ಲೆ

### ಗಾಂಧೀ ಜಯಂತಿ ಆಚರಣೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಉಡುಪಿ ಜಿಲ್ಲಾ ಸಂಸ್ಥೆ ಮತ್ತು ಕಡಿಯಾಳಿ ಹಿರಿಯ ಪ್ರಾಥಮಿಕ ಶಾಲೆಯ ಜಂಟಿ ಆಶ್ರಯದಲ್ಲಿ ಗಾಂಧೀಜಯಂತಿಯನ್ನು ರೋಟರಿ ಸ್ಕೌಟ್ಸ್ ಭವನ, ಕಡಿಯಾಳಿ, ಉಡುಪಿ ಇಲ್ಲಿ ದಿನಾಂಕ 2-10-2007 ರಂದು ಆಚರಿಸಲಾಯಿತು.

ಕಡಿಯಾಳಿ ಹಿರಿಯ ಪ್ರಾಥಮಿಕ ಶಾಲೆ ಮತ್ತು ಯು. ಕಮಲಾ ಬ್ಯಾ ಪ್ರೌಢ ಶಾಲೆ, ಕಡಿಯಾಳಿ ಉಡುಪಿ ಇಲ್ಲಿಯ ಸ್ಕೌಟ್ಸ್ ಗೈಡ್ಸ್ ವಿದ್ಯಾರ್ಥಿಗಳು ಪರಿಸರ ಸ್ವಚ್ಛತೆ, ಸಮಾಜ ಸೇವೆ ಮತ್ತು ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು. ಕಡಿಯಾಳಿ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರು ಶ್ರೀ ಸದಾನಂದ ಶರ್ಮರವರ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮ ಜರುಗಿತು. ಗಾಂಧೀಜಿಯವರು ಜೀವನದಲ್ಲಿ ಅಳವಡಿಸಿಕೊಂಡ ಸತ್ಯ, ಸಹನೆ, ತ್ಯಾಗ, ಅಹಿಂಸೆ, ಸರಳತೆ ಇಡೀ ವಿಶ್ವಕ್ಕೇ ಮಾದರಿಯಾಗಿದೆ ಎಂದು ಶ್ರೀ ಸದಾನಂದ ಶರ್ಮ ಇವರು ತಮ್ಮ ಅಧ್ಯಕ್ಷಿಯ ಭಾಷಣದಲ್ಲಿ ತಿಳಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಬಿ.ಜಿ. ವಾರಂಬಳ್ಳಿ ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರು (ಸ್ಕೌಟ್ಸ್) ರವರು ಗಾಂಧೀಜಿಯವರ ತತ್ವಗಳು ಸ್ಕೌಟ್ಸ್ ಪ್ರತಿಜ್ಞೆ ಮತ್ತು ನಿಯಮದ ಅಂಶಗಳಿಗೆ ಪೂರಕವಾಗಿದೆ ಇದನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ದೇಶದ ಸತ್ಪ್ರಜೆಗಳಾಗಬೇಕಾಗಿ ವಿದ್ಯಾರ್ಥಿಗಳಿಗೆ ಹಿತವಚನ ನೀಡಿದರು.

### ಮುಖ್ಯೋಪಾಧ್ಯಾಯರುಗಳಿಗೆ ಸ್ಕೌಟಿಂಗ್-ಗೈಡಿಂಗ್ ಮಾಹಿತಿ ಶಿಬಿರ

ದಿನಾಂಕ 29-9-2007 ರಂದು ಉಡುಪಿ ದಕ್ಷಿಣ ವಲಯದ ಹಿರಿಯ ಪ್ರಾಥಮಿಕ ಶಾಲೆಗಳ ಮುಖ್ಯೋಪಾಧ್ಯಾಯರ ಸಭೆ ವಿದ್ಯಾವರ್ದಕ ಹಿರಿಯ ಪ್ರಾಥಮಿಕ ಶಾಲೆ, ಪಾಂಗಾಳ, ಉಡುಪಿ ಇಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಡಿ. ಮಂಜುನಾಥಯ್ಯರವರ ಅಧ್ಯಕ್ಷತೆಯಲ್ಲಿ ಜರುಗಿದ್ದು. ಶ್ರೀ ಬಿ.ಜಿ. ವಾರಂಬಳ್ಳಿ ಸ್ಕೌಟಿಂಗ್ ಗೈಡಿಂಗ್ ಚಳುವಳಿಯ ಬಗ್ಗೆ ಹಾಗೂ ಶಿಕ್ಷಕರ ಪ್ರಾಥಮಿಕ ತರಬೇತಿಯ ಬಗ್ಗೆ ಮುಖ್ಯೋಪಾಧ್ಯಾಯರು-ಗಳಿಗೆ ಮಾಹಿತಿ ನೀಡಿದರು. ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎಡ್ವಿನ್ ಆಳ್ವ, ಸಹಾಯಕ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಯಂ. ಪ್ರಭಾಕರ ಭಟ್ ಉಪಸ್ಥಿತರಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಡಿ. ಮಂಜುನಾಥಯ್ಯ ಎಲ್ಲಾ ಶಾಲೆಗಳಲ್ಲಿಯೂ ಸ್ಕೌಟ್ಸ್ ಗೈಡ್ಸ್ ದಳಗಳನ್ನು ಪ್ರಾರಂಭಿಸುವಂತೆ ತಿಳಿಸಿದರು.

ದಿನಾಂಕ 6-10-2007 ರಂದು ಉಡುಪಿ ಜಿಲ್ಲೆಯ ಪ್ರೌಢ ಶಾಲೆಗಳ ಮುಖ್ಯೋಪಾಧ್ಯಾಯರ ಸಭೆಯು, ಕಮಲಾ ಬ್ಯಾ ಪ್ರೌಢ ಶಾಲೆ, ಕಡಿಯಾಳಿಯಲ್ಲಿ ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಅಧ್ಯಕ್ಷತೆಯಲ್ಲಿ ಜರುಗಿತು. ಈ ಸಂದರ್ಭದಲ್ಲಿ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಶ್ರೀ ಎಂ. ಪ್ರಭಾಕರ ಭಟ್, ಜಿಲ್ಲೆಯಲ್ಲಿ ನಡೆಯಲಿರುವ ಸ್ಕೌಟ್ಸ್-ಗೈಡ್ಸ್ ತರಬೇತಿ ಶಿಬಿರಗಳ ಮಾಹಿತಿನೀಡಿದರು. ಶ್ರೀ ಕೆ. ಆನಂದ್, ಉಪ-ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಹೆಚ್ಚಿನ ಶಾಲೆಗಳಿಂದ ಶಿಕ್ಷಕರನ್ನು

ಸ್ಕೌಟ್ಸ್ ಗೈಡ್ಸ್ ಶಿಕ್ಷಕರ ತರಬೇತಿಗೆ ನಿಯೋಜಿಸುವಂತೆ ತಿಳಿಸಿದರು. ಹಾಗೂ ಶಾಲೆಗಳಲ್ಲಿ ಸ್ಕೌಟ್ಸ್ ಚಟುವಟಿಕೆಗಳನ್ನು ಉತ್ತಮವಾಗಿ ನಡೆಸುವಂತೆ ತಿಳಿಸಿದರು.

## ಗದಗ್ ಜಿಲ್ಲೆ

### ಮೂಲ ತರಬೇತಿ ಶಿಬಿರ

ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಗದಗ ಮತ್ತು ಡಯಾಟ್ ಇವರ ಗದಗ ಸಂಯುಕ್ತಾಶ್ರಯದಲ್ಲಿ ದಿವಂಗತ ಶ್ರೀ ಕೆ.ಎಚ್. ಪಾಟೀಲ ಕೃಷಿ ವಿಜ್ಞಾನ ಕೇಂದ್ರ, ಹುಲಕೋಟಿಯಲ್ಲಿ ದಿನಾಂಕ 6-10-2007 ರಿಂದ 15-10-2007ರ ವರೆಗೆ ಸ್ಕೌಟ್ಸ್ ಶಿಕ್ಷಕರಿಗಾಗಿ ಮತ್ತು 9-10-2007 ರಿಂದ 15-10-2007ರ ವರೆಗೆ ಗೈಡ್ಸ್ ಶಿಕ್ಷಕಿಯರಿಗಾಗಿ ಮೂಲ ತರಬೇತಿ ಶಿಬಿರವು ಜರುಗಿತು. ನಾಯಕರಾಗಿ ಶ್ರೀ ಜಿ.ಎ. ನರಗುಂದ, ಎಲ್.ಟಿ(ಎಸ್), ಧಾರವಾಡ, ಶ್ರೀಮತಿ ಪ್ರಭಾ ಲೊಂಡೆ, ಎಲ್.ಟಿ.(ಜಿ), ಧಾರವಾಡ ಇವರು ನಾಯಕರಾಗಿದ್ದರು.

ಮೂಲ ತರಬೇತಿಯ ಉದ್ಘಾಟನೆಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ-ನಿರ್ದೇಶಕರಾದ ಮತ್ತು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎನ್.ಎಚ್. ಕಟಕದೊಂಡರವರು ನೆರವೇರಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಮುಕುಂದ ಪೋತ್ನೀಸ್, ಸ್ಕೌಟ್ಸ್ ಜಿಲ್ಲಾ ಆಯುಕ್ತರು, ಕೃಷಿ ವಿಜ್ಞಾನ ಕೇಂದ್ರದ ಸಂಚಾಲಕರಾದ ಶ್ರೀ ಹಿರೇಗೌಡರ, ಡಯಟ್ ಉಪನ್ಯಾಸಕರಾದ ಶ್ರೀ ಬಡಿಗೇರ ಮತ್ತು ಶ್ರೀ ಚವ್ಹಾಣರವರು ಆಗಮಿಸಿದ್ದರು.

## ಉತ್ತರ ಕನ್ನಡ ಜಿಲ್ಲೆ

ದಿನಾಂಕ 2-10-2007 ರಂದು ಮುಂಜಾನೆ 9 ಗಂಟೆಗೆ ಸರಿಯಾಗಿ ಮಾರ್ಥೋಮಾ ಶಾಲೆಯ ಎಲ್ಲಾ ವಿದ್ಯಾರ್ಥಿ, ವಿದ್ಯಾರ್ಥಿನಿಯರು, ಸ್ಕೌಟ್ಸ್-ಗೈಡ್ಸ್ ಮಕ್ಕಳು ಸೇರಿ ಗಾಂಧೀಜಯಂತಿಯನ್ನು ಶ್ರದ್ಧಾ ಮನೋಭಾವದಿಂದ ಆಚರಿಸಿದರು. ಅಂದು ಶಾಲೆಯ ಸಭಾಭವನದಲ್ಲಿ ಮಹಾತ್ಮ ಗಾಂಧೀಜಿಯವರ ಭಾವಚಿತ್ರವನ್ನು ಇರಿಸಿ ಸ್ಕೌಟ್ ಮಾಸ್ಟರ್ ಶ್ರೀ ಬಿ.ಡಿ. ಫರ್ನಾಂಡೀಸ್‌ರವರಿಂದ ದೀಪ ಬೆಳಗಿಸಿ ಕಾರ್ಯಕ್ರಮವನ್ನು ಉದ್ಘಾಟಿಸಲಾಯಿತು. ಶಾಲೆಯ ಎಲ್ಲಾ ಶಿಕ್ಷಕ ವೃಂದದವರು ಗಾಂಧೀಜಿಯವರ ಭಾವಚಿತ್ರಕ್ಕೆ ಪುಷ್ಪಗಳನ್ನು ಅರ್ಪಿಸಿದರು. ನಂತರ ಮಿಸ್ ಇಡಾಲಿನ್ ದಾಸ್ - ಇವರು ಗಾಂಧೀಜಿಯವರ ಬಗ್ಗೆ ಮಾತನಾಡಿದರು. ನಂತರ ಮಕ್ಕಳಿಂದ ದೇಶ ಭಕ್ತಿ ಗೀತೆಗಳನ್ನು ಹಾಡಿಸಲಾಯಿತು. ಈ ಕಾರ್ಯಕ್ರಮವನ್ನು ಮಿಸ್ ಟ್ರೇಸಾ ಫರ್ನಾಂಡಿಸ್‌ರವರು ನಿರೂಪಿಸಿದರು.

ಕೊನೆಯಲ್ಲಿ ಸ್ಕೌಟ್ಸ್ ಗೈಡ್ಸ್ ಮಕ್ಕಳಿಂದ ಶಾಲೆಯ ಬಯಲಿನಲ್ಲಿ ಬಿದ್ದ ಪ್ಲಾಸ್ಟಿಕ್, ಕಾಗದಗಳನ್ನು ಹೆಕ್ಕಿ ಶಾಲೆಯ ಬಯಲನ್ನು ಸ್ವಚ್ಛಗೊಳಿಸಲಾಯಿತು. ಅಲ್ಲದೇ ಶಾಲೆಯ ಶೌಚಾಲಯಗಳನ್ನು ಸ್ಕೌಟ್ಸ್ ಗೈಡ್ಸ್ ಮಕ್ಕಳು ಸ್ವಚ್ಛಗೊಳಿಸಿ, ಉಳಿದವರಿಗೆ ಮಾದರಿಯಾದರು. ಈ ಸ್ವಚ್ಛತಾ ಕೆಲಸವನ್ನು ಶಾಲೆಯ ಪ್ರಾಂಶುಪಾಲರಾದ ಪಾ. ಥೊಮೆಸ್ ವೆಂಥ್ಯು ಹಾಗೂ ಮುಖ್ಯೋಧ್ಯಾಪಕಿಯರಾದ ಶ್ರೀಮತಿ ರ್‍ಯಾಚಲ್ ಥೊಮೆಸ್ ಮೆಚ್ಚಿದರಲ್ಲದೇ ಸ್ಕೌಟ್ಸ್ ಗೈಡ್ಸ್‌ಗಳನ್ನು ಶ್ಲಾಘಿಸಿದರು. ಈ ಕಾರ್ಯಕ್ರಮದ ನೇತೃತ್ವವನ್ನು ಸ್ಕೌಟ್ ಮಾಸ್ಟರ್ ಶ್ರೀ ಬಿ.ಡಿ. ಫರ್ನಾಂಡೀಸ್ ಇವರು ನಿರ್ವಹಿಸಿದ್ದರು.

## Bangalore North Distritct

*Shivajinagar Local Association organised free Eye Checkup on the occasion of Gandhi Jayanthi Celebrations.*

*It was Sponsored by Shree Jain Social Mandal. President of the*

*Association Mrs. Manjula Palida, Eye Sergeon Dr. Narpat Solanki of Mahavera Eye Hospital were present.*

*The programme was inaugurated by Dr. H.T. Sangliana, I.P.S.(Retd) and Hob'ble Member of Parliament. Nearly 250 patients had the benefit of the camp. Prof. M Suryanarayanappa, ASC(S), Sir T.S. Lucas ASC(S), Chairman of the L.A., Mrs. Geetha Nataraj L.T., & J.S.S. (G) Ms. Pathanjali Nicoduees, President. Mr. Ashok Wajree Deputy Training Commendant of Home Guards and Civil Defence Mrs. Susheela Gopal, H.Q. Commissioner (G) Ms. B.V. Ramalatha, D.C.(G) and Sr. Clara, Principal of St. Joseph's Convent Girls High School Smt B. Revathi L.T.(B) and Miss. Krupa and Office bearers of Shivajinagar LA were present.*

- ಧರ್ಮದಿಂದ ಸಂಪತ್ತು, ಸುಖ ದೊರೆಯುತ್ತದೆ. ಎಲ್ಲ ಇಷ್ಟಾರ್ಥಗಳೂ ಧರ್ಮದಿಂದಲೇ ಲಭಿಸುತ್ತವೆ. ಆದ್ದರಿಂದ ಪ್ರಪಂಚದಲ್ಲಿ ಧರ್ಮವೇ ಶ್ರೇಷ್ಠವಾದುದು.

  **- ವಾಲ್ಮೀಕಿ ರಾಮಾಯಣ**

- ರಟ್ಟೆ ಮುರಿದು ಸಂಪಾದಿಸಿದ ರೊಟ್ಟಿಯ ರುಚಿ, ದೇವಲೋಕದ ಅಮೃತಕ್ಕೂ ಮಿಗಿಲು.

  **- ಟಿ.ಪಿ. ಕೈಲಾಸಂ**

- ಚಂದನವಾಗಲಿ, ಜಾಜಿಯಾಗಲಿ, ಕಮಲದ ಹೂ ಆಗಲಿ - ಇವುಗಳೆಲ್ಲದರ ವಾಸನೆಗಿಂತ ಮನುಷ್ಯನ ನಡತೆಯ ಪರಿಮಳವೇ ಹೆಚ್ಚು.

  **- ಬುದ್ಧ**

- ಯಾರು ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳುತ್ತಾರೋ, ಅವರಿಗೆ ದೇವರೂ ಸಹಾಯ ಮಾಡುತ್ತಾನೆ.

  **- ಎಸ್. ರಾಧಾಕೃಷ್ಣನ್**

# Activities held at the31st State Level Cubs & Bulbuls Utsav, from14 - 17 October 2007 at Donimalai Township, NMDC



Cubs participating in the Peace March procession at the Ustav.



Bulbuls participating in the Peace March procession at the Utsav.



Cubs participating in the Adventure Activities at the Utsav.



Bulbuls participating in the Adventure Activities at the Utsav.



Cubs participating in the Folk Dance Programme at the Utsav.



Bulbuls participating in the Folk Dance Programme at the Utsav.

स्काउट शताब्दी – महोत्सव 2007
Scout Centenary 2007

प्रसारण सम्बंधी विश्व स्काउट जम्बूरी
World Scout Jamboree on the Air

विशेष आवरण SPECIAL COVER




de VU2LCI ट VU2ARC
भारत स्काउट एवं गाइड
कर्नाटक, भारत
Bharath Scouts & Guides
Karnataka, INDIA




20-10-2007
बेंगलूर जी पी ओ
Bangalore GPO 560 001

**A Special Cancellation Postal Cover was released on 20-10-2007 at GPO, Bangalore Issued by Karnataka Postal Circle on the occasion of the 50TH Anniversary of World Scout Jamboree on-the-Air(JOTA 2007).**

**- K S & G NEWS**



100 A Hundred years of Promise 2007
Scouting Celebrates Centenary In 2007

YOUR SUPPORT WILL HELP US
TO REACH OUR GOAL

Regd as News Paper (Magazine) No : **CPMG/KA/BGW-549/2006-08**
Permitted to Post under WPP System
Vide No.: WPP-87 of SSP, BANGALORE WEST
Posted at: Bangalore City H.P.O. on 6-11-2007




**If not delivered please return to :**

EDITOR, Karnataka Scout & Guide
State Headquarters, Prof. P. Sivashankar Circle
Kondajji Basappa Road, Fort
Bangalore - 560 002. Ph:26701227

published for : The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.